**Shri Ramachandracharya Virachitam**

# “SriVadiraja Guruvara Charithamrutham”

**Kannada Translation**

**by**

**Shri K. S. Vadiraja**

॥ ಶ್ರೀ ಕೃಷ್ಣ ವರಾಹ ಹಯಗ್ರೀವ ಬಾದರಾಯಣಾಃ ಪ್ರಸೀದಂತು ॥
॥ ಶ್ರೀ ಭಾವಿಸಮೀರ ವಾದಿರಾಜಗುರುಭ್ಯೋ ನಮಃ ॥
॥ ಶ್ರೀ ವೇದನಿಧಿಗುರುಭ್ಯೋ ನಮಃ ॥

# ಶ್ರೀ ವಾದಿರಾಜಗುರುವರ ಚರಿತಾಮೃತಮ್

## ॥ ಪ್ರಥಮ ಬಿಂದುಃ ॥

**ಶ್ಲೋಕ:–** **ಶ್ರಿಯಃ ಪತಿಂ ಭೂಧರಮಪ್ರಮೇಯಂ ವರಾಹಮೀಶಂ ಹ್ಯನಿಶಂ ನಮಾಮಿ।**
**ಹಯಾಸ್ಯಮಪ್ಯಾದರತೋ ಭಜಾಮಿ ಮಧ್ವೇಶಕೃಷ್ಣಂ ಪ್ರಣಮಾಮಿ ಭಕ್ತ್ಯಾ ॥1॥**

**ಅರ್ಥ:–** ಲಕ್ಷ್ಮೀ ಪತಿಯಾದ, ಸಂಪೂರ್ಣವಾಗಿ ತಿಳಿಯಲಶಕ್ಯನಾದ ಸ್ವಾಮಿಯಾದ, ಭೂಮಿಯನ್ನು ಧರಿಸಿರುವ, ವರಾಹನನ್ನು ಸದಾ ನಮಸ್ಕರಿಸುತ್ತೇನೆ. ಹಯಗ್ರೀವನನ್ನು ಆದರ ಪೂರ್ವಕ ಭಜಿಸುತ್ತೇನೆ. ಹಾಗೂ ಮಧ್ವೇಶಕೃಷ್ಣನನ್ನು ಭಕ್ತಿಯಿಂದ ನಮಸ್ಕರಿಸುತ್ತೇನೆ.

**ಶ್ಲೋಕ:–** **ಸ್ತೋತವ್ಯಕರ್ಮಾಣಮಿಲಾತಲೇಽಸ್ಮಿನ್ ಗಾತವ್ಯ ಮಹಾತ್ಮ್ಯ ಸುಪಾತ್ರಭೂ ತಮ್।**
**ಲಾತವ್ಯರೂಪಂ ಗುರುವಾದಿರಾಜಂ ಧ್ಯಾತವ್ಯಮೂರ್ತಿಂ ಪ್ರಣತೋಽಸ್ಮಿಭಕ್ತ್ಯಾ ॥2॥**

**ಅರ್ಥ:–** ಈ ಭೂಮಿಯಲ್ಲಿ ಯಾರ ಲೀಲೆಗಳು ಸ್ತುತಿಸಲು ಯೋಗ್ಯವಾಗಿದೆಯೋ ಯಾರ ಮಹಾತ್ಮ್ಯಗಳು ಹಾಡಲು ಯೋಗ್ಯವಾಗಿದೆಯೋ, ಅಂತಹ ಧ್ಯಾನಿಸಲು ಯೋಗ್ಯರಾದ, ಸುಪಾತ್ರರಾದ ಲಾತವ್ಯ ಸ್ವರೂಪರಾದ ಗುರು ವಾದಿರಾಜರನ್ನು ಭಕ್ತಿಯಿಂದ ನಮಸ್ಕರಿಸುತ್ತೇನೆ.

**ಶ್ಲೋಕ:–** **ಶ್ರೀ ವೇದವೇದ್ಯಂ ಪರಮಂ ಗುರುಂ ತಂ ಪ್ರಣಮ್ಯ ತಚ್ಛಿಷ್ಯವರಾನ್ಗುರೂನ್ಮೇ।**
**ಶ್ರೀ ವೇದನಿಧ್ಯಾಖ್ಯಯತೀಂಸ್ತದಾಜ್ಞಾಮಾಲಂಬ್ಯ ಸಂವಚ್ಮಿ ಗುರೋಶ್ಚರಿತ್ರಮ್ ॥3॥**

**ಅರ್ಥ:–** ಪರಮ ಗುರುಗಳಾದ ಶ್ರೀ ವೇದವೇದ್ಯರನ್ನು ಹಾಗೆಯೇ ಅವರ ಶ್ರೇಷ್ಠ ಶಿಷ್ಯರಾದ ನನ್ನ ಗುರುಗಳಾದ ಶ್ರೀ ವೇದನಿಧಿಯತಿಗಳನ್ನು ನಮಸ್ಕರಿಸಿ, ಅವರ ಆಜ್ಞೆಯನ್ನು ಆಶ್ರಯಿಸಿ ಗುರುಗಳ (ವಾದಿರಾಜರ) ಚರಿತ್ರೆಯನ್ನು ಯಥಾರ್ಥವಾಗಿ ಹೇಳುವೆನು.

**ಶ್ಲೋಕ:–** **ಸುರೈ: ಪ್ರವರ್ಣ್ಯಂ ಗುರುವಾದಿರಾಜಚರಿತ್ರಮಾವರ್ಣಯಿತುಂ ಸಮುತ್ಕಃ।**
**ಹಾಸ್ಯೋ ಭವೇಯಂ ವಿಬುಧೈಸ್ತಥಾಪಿ ಗುರೂತ್ತಮಾಜ್ಞಾ ಬಲತಃ ಪ್ರವೃತ್ತಃ ॥4॥**

**ಅರ್ಥ:–** ದೇವತೆಗಳಿಂದ ಹಾಗೂ ಅಪರೋಕ್ಷ ಜ್ಞಾನಿಗಳಿಂದ, ಚೆನ್ನಾಗಿ ವರ್ಣಿಸಲು ಯೋಗ್ಯವಾದ ಗುರುವಾದಿರಾಜರ ಚರಿತ್ರೆಯನ್ನು ನಾನು ವರ್ಣಿಸಲು ಉತ್ಸುಕನಾಗಿರುವೆ ನೆಂಬುದು ಹಾಸ್ಯಾಸ್ಪದವೇ, ಆದಾಗ್ಯೂ ಗುರುಗಳ ಆಜ್ಞಾ (ಅನುಗ್ರಹ) ಬಲದಿಂದ ಪ್ರವೃತ್ತನಾಗಿದ್ದೇನೆ.

**ಶ್ಲೋಕ:–** **ಕುಠಾರಪಾಣಿನಾ ಸೃಷ್ಟೇ ತೌಲವೇ ಮಂಡಲೇ ಪುರಾ ।**
**ಕುಂಭಾಸಿಕ್ಷೇತ್ರ ನಿಕಟೇ ಪುಷ್ಪಕಾಸಾರ ಸಂಜ್ಞಕೇ ॥5॥**
**ರಾಮಾಚಾರ್ಯಃ ಸಾಮವೇದೀ ಷಟ್‌ಕರ್ಮ ನಿರತೋ ದ್ವಿಜಃ ।**
**ಸರಸ್ವತ್ಯಾಖ್ಯಯಾ ಪತ್ನ್ಯಾ ಸ್ವಧರ್ಮನಿರತೋಽ ವಸತ್ ॥6॥**

**ಅರ್ಥ:–** ಹಿಂದೆ ಪರಶುರಾಮ ಸೃಷ್ಟಿಯಲ್ಲಿ, ತೌಳವ ದೇಶದಲ್ಲಿ, ಕುಂಭಾಸಿ ಕ್ಷೇತ್ರದ ಸಮೀಪದಲ್ಲಿರುವ ಹೂವಿನಕೆರೆ ಎಂಬ ಗ್ರಾಮದಲ್ಲಿ ಸಾಮವೇದಿಗಳಾದ ಷಟ್‌ಕರ್ಮನಿರತರಾದ ರಾಮಾಚಾರ್ಯ ಎಂಬ ಬ್ರಾಹ್ಮಣರು ಸರಸ್ವತಿ ಎಂಬ ಹೆಸರಿನ ತಮ್ಮ ಪತ್ನಿಯೊಂದಿಗೆ ಸ್ವಧರ್ಮದಲ್ಲಿ ನಿರತರಾಗಿ ವಾಸವಾಗಿದ್ದರು.

**ಶ್ಲೋಕ:–** **ಯಾಂ ಗೌರೀಮಿತಿ ಚ ಪ್ರಾಹುರ್ದೇವಭಟ್ಟಂ ಚ ತಂ ವಿದುಃ ।**
**ಸಂತಾನವಾನ್‌ಕನ್ಯಕಯಾ ಲಿಪ್ಸುಃ ಸುಗುಣಮಾತ್ಮಜಂ ॥7॥**

ಅರ್ಥ:– ಆ ಸರಸ್ವತಿಯನ್ನು ಗೌರಿ ಎಂದೂ ರಾಮಾಚಾರ್ಯರನ್ನು ದೇವಭಟ್ಟರೆಂದೂ ಕರೆಯುತ್ತಿದ್ದರು. ಕನ್ಯಾಸಂತಾನವುಳ್ಳ ಆ ದಂಪತಿಗಳು ಸದ್ಗುಣವುಳ್ಳ ಮಗನನ್ನು ಪಡೆಯಬೇಕೆಂದು ಇಚ್ಛಿಸಿದರು.

**ಶ್ಲೋಕ:–** **ಕುಂಭಾಸಿಕ್ಷೇತ್ರಮಠಗಾನ್ ಶ್ರೀ ವಾಗೀಶಮುನೀಶ್ವರಾನ್ ।**
**ಭಕ್ತಾನುಗ್ರಹದಕ್ಷಾಂಸ್ತಾನ್ ಶ್ರುತ್ವಾ ಶರಣಮೇಯಿವಾನ್ ॥8॥**

**ಅರ್ಥ:–** ಕುಂಭಾಸಿ ಕ್ಷೇತ್ರದಲ್ಲಿರುವ ಮಠದಲ್ಲಿ ವಾಸವಾಗಿರುವ ಶ್ರೀ ವಾಗೀಶ ಮುನಿವರ್ಯರು ಭಕ್ತರ ಅಭೀಷ್ಟಗಳನ್ನು ಈಡೇರಿಸುವದರಲ್ಲಿ ದಕ್ಷರು ಎಂಬುದಾಗಿ ತಿಳಿದು, ಅವರನ್ನು ಶರಣು ಹೊಂದಿದರು.

**ಶ್ಲೋಕ:–** **ಗೌರೀ ತು ಸುತಲಾಭಃ ಸ್ಯಾದ್ಯದಿ ಲಕ್ಷಸುಭೂಷಣೈಃ ।**
**ಶ್ರೀಪತಿಂ ಪೂಜಯಿಷ್ಯೇಽಹಮಿತಿ ಸಂಕಲ್ಪವತ್ಯಭೂತ್॥ ॥9॥**

**ಅರ್ಥ:–** ಗೌರಿಯಾದರೋ ಪುತ್ರ ಸಂತಾನವಾದರೆ ಶ್ರೀ ಲಕ್ಷ್ಮೀಪತಿಯನ್ನು ಲಕ್ಷಾಭರಣಗಳಿಂದ ಪೂಜಿಸುತ್ತೇನೆ ಎನ್ನುವ ಸಂಕಲ್ಪವುಳ್ಳವಳಾದಳು.

**ಶ್ಲೋಕ:–** **ಶ್ರೀ ವಾಗೀಶಯತೀಶಾಸ್ತೇ ದಂಪತೀ ಶರಣಾಗತೌ ।**
**ಕೃಪಾದೃಷ್ಟ್ಯಾಽನು ಗೃಹ್ಣಂತೋ ಭವೇತಾಂ ಪುತ್ರಶಾಲಿನೌ ॥10॥**

**ಅರ್ಥ:–** ಶರಣು ಹೊಂದಿದ ದಂಪತಿಗಳಿಗೆ ಶ್ರೀ ವಾಗೀಶರು ಕೃಪಾದೃಷ್ಟಿಯಿಂದ ಅನುಗ್ರಹಿಸುತ್ತಾ ಪುತ್ರವಂತರಾಗಿರೆಂದು ಆದೇಶಿಸಿದರು.

**ಶ್ಲೋಕ:–** **ಮಂತ್ರಾಕ್ಷತಾನ್ ಸ್ವೀಕುರುತಮಿತ್ಯುಕ್ತ್ವಾ ಪ್ರದದುಃ ಕಿಲ. ।**
**ಕಿಂ ತು ವಾಚಂ ಯುವಾಂ ಪಾತಂ ಮದೀಯಾಂಜಾತಮಾತ್ರಕಮ್ ॥11॥**

ಅರ್ಥ:– ಮಂತ್ರಾಕ್ಷತೆಯನ್ನು ಸ್ವೀಕರಿಸಿ ಎಂದು ಹೇಳಿ ಮಂತ್ರಾಕ್ಷತೆಯನ್ನು ಕೊಟ್ಟರು ಮತ್ತು ಹುಟ್ಟಿದ ತತ್‌ಕ್ಷಣ ದಿಂದಲೇ ಮಗು ನನ್ನದು ಎಂದು ಹೇಳಿದರು.

**ಶ್ಲೋಕ:–** **ಪವಿತ್ರಸ್ವರ್ಣಪಾತ್ರಸ್ಥಂ ಸ್ವರ್ಣವರ್ಣಮನೋರಮಮ್ ।**
**ಶಿಶುಂ ದತ್ತಂ ಮದಾರಾಧ್ಯ ಕೋಲಾಯೇತಿ ವಚೋಽಬ್ರುವನ್ ॥12॥**

**ಅರ್ಥ:–** ಪವಿತ್ರವಾದ ಸುವರ್ಣಪಾತ್ರೆಯಲ್ಲಿರುವ, ಹೊಂಬಣ್ಣದ ಮನೋಹರವಾದ, ದತ್ತವಾದ ಶಿಶುವು ತನ್ನ ಆರಾಧ್ಯ ದೇವತೆಯಾದ ಭೂವರಾಹನಿಗೆ (ಸಮರ್ಪಿಸಬೇಕು) ಎನ್ನುವ ಮಾತುಗಳನ್ನು ಹೇಳಿದರು.

**ಶ್ಲೋಕ:–** **ಆಕರ್ಣ್ಯ ತದ್ವಾಚಮಿಮಾಂ ತು ದಂಪತೀ**
**ಖಿನ್ನೌ ಯದಾಽಽಸ್ತಾಂ ಗುರವೋಽವದಂಸ್ತದಾ ।**
**ಯದಿ ಪ್ರಸೂಯೇತ ಭವನ್ನಿಕೇತನೇ**
**ತದಾ ಸ ಬಾಲೋ ಯುವಯೋಃ ಪರಂ ಭವೇತ್ ॥13॥**

**ಅರ್ಥ:–** ಅವರ ಈ ಮಾತುಗಳನ್ನು ಕೇಳಿದ ಆ ದಂಪತಿಗಳು ದುಃಖಿತರಾಗಲು ಆಗ ಗುರುಗಳು "ಆ ಮಗುವು ನಿಮ್ಮ ಮನೆಯಲ್ಲಿ ಹುಟ್ಟಿದರೆ ನಿಮ್ಮವನಾಗುವನು" ಎಂದು ಹೇಳಿದರು.

**ಶ್ಲೋಕ:–** **ಬಹಿಃ ಪ್ರಸೂಯೇತ ತದಾ ಸ ಮಹ್ಯಂ**
**ದೇಯಃ ಸುದೈವಂ ಹಿ ಪರೀಕ್ಷಣೀಯಂ ।**
**ಆಶ್ವಾಸಿತಾವೇವಮಮೂನ್ಪ್ರಣಮ್ಯ**
**ಗೃಹಂ ಗತೌ ಸಾ ತು ಬಭಾರ ಗರ್ಭಂ ॥14॥**

**ಅರ್ಥ:–** "ಮನೆಯ ಹೊರಗೆ ಪ್ರಸವಿಸಿದರೆ ಆಗ ಆ ಮಗುವನ್ನು ನಮಗೆ ಕೊಡತಕ್ಕದ್ದು. ಅದೃಷ್ಟವನ್ನು ಪರೀಕ್ಷಿಸೋಣ" ಈ ರೀತಿಯಾಗಿ ಗುರುಗಳು ಭರವಸೆಯನ್ನು ಕೊಡಲು ಆ ದಂಪತಿಗಳು ಅವರಿಗೆ ನಮಿಸಿ ಮನೆಗೆ ಹೋದರು. ಕೆಲವು ಸಮಯ ನಂತರ ಆ ಗೌರಿದೇವಿ ಗರ್ಭವನ್ನು ಧರಿಸಿದಳು.

**ಶ್ಲೋಕ:–** **ಸಾ ಗರ್ಭಿಣೀ ದೋಹದಮದ್ಭುತಂ ತದ್ದಧಾರ ತೀರ್ಥಾದ್ಯವಗಾಹನೇಚ್ಛುಃ॥**
**ತತ್ತ್ವಾನಿ ಶುಶ್ರೂಷುರಹೋ ದಿದೃಕ್ಷುರ್ಹರೇಃ ಶುಭಾರ್ಚಾಃ ಕಿಲ ಸಂಬಭೂವ ॥15॥**

ಅರ್ಥ:– ಆ ಗರ್ಭವು (ಕಾಮಧೇನುವಿನಂತೆ) ಅದ್ಭುತ (ಅಭೀಷ್ಟಗಳನ್ನು) ಕೊಡುವ (ಜೀವವನ್ನು) ಧರಿಸಿತು. ಆ ಗರ್ಭಿಣಿಯು ತೀರ್ಥಾದಿಗಳಲ್ಲಿ ಸ್ನಾನವನ್ನು ಇಚ್ಛಿಸಿದಳು. ಶ್ರೀ ಹರಿಯ ನಿಜಸ್ವರೂಪವನ್ನು ಸೇವಿಸಿದಳು. ಅವಳಿಗೆ ಶ್ರೀ ಹರಿಯ ಶೋಭನವಾದ ಪೂಜೆಗಳನ್ನು ನೋಡುವ ಇಚ್ಛೆಗಳುಂಟಾಗುತ್ತಿದ್ದವು.

**ಶ್ಲೋಕ:–** **ರಾಮಾಚಾರ್ಯೋ ಗುರೋರ್ವಾಚಂ ಸ್ಮರನ್ಪೂರ್ಣಸುಗರ್ಭಿಣೀಮ್।**
**ಗೇಹಾಂತರೇಽವರುರುಧೇ ಬಹಿಃ ಪ್ರಸವಭೀತಿತ: ॥16॥**

**ಅರ್ಥ:–** ರಾಮಾಚಾರ್ಯರು ಗುರುಗಳ ಮಾತನ್ನು ಜ್ಞಾಪಿಸಿಕೊಳ್ಳುತ್ತಾ ಮನೆಯ ಹೊರಗೆ ಹೆರಿಗೆ ಆಗಬಹುದುದೆಂಬ ಹೆದರಿಕೆಯಿಂದ ತುಂಬು ಗರ್ಭಿಣಿಯಾದ ಸರಸ್ವತಿದೇವಿಯರನ್ನು ಮನೆಯ ಹೊರಗೆ ಹೋಗದಂತೆ ತಡೆಯುತ್ತಿದ್ದರು.

**ಶ್ಲೋಕ:–** **ಸಂಪ್ರಾಪ್ತೇ ದಶಮೇ ಮಾಸೇ ಸಾಧನದ್ವಾದಶೀ ತಿಥೌ ।**
**ಆಚಾರ್ಯೇ ಪಾರಣಾಸಕ್ತೇ ತದಾ ಕೇದಾರಸಸ್ಯಕಮ್ ॥ 17॥**

**ಗೌರೇಕಾ ಸಹಸಾಽಽಗತ್ಯ ಭೋಕ್ತುಂ ಸಮುಪಚಕ್ರಮೇ ।**

**ಅರ್ಥ:–** ಗರ್ಭಿಣಿಗೆ ಹತ್ತನೆ ತಿಂಗಳು ಪ್ರಾಪ್ತವಾಗಲು, ಸಾಧನದ್ವಾದಶಿಯ ದಿನ ರಾಮಾಚಾರ್ಯರು ಪಾರಣಾಸಕ್ತರಾಗಿರಲು, ಹಠಾತ್ತಾಗಿ ಒಂದು ಹಸುವು ಗದ್ದೆಯಲ್ಲಿನ ಸಸ್ಯವನ್ನು ತಿನ್ನಲು ಪ್ರಾರಂಭಿಸಿತು.

**ಶ್ಲೋಕ:–** **ದಾರಿದ್ರ್ಯಪೀಡಿತಾ ಸಾಧ್ವೀ ಸಸ್ಯಭಕ್ಷಣತತ್ಪರಾಮ್ ॥ 18 ॥**
**ಪತ್ಯಾಜ್ಞಯಾ ಗಾಂ ನಿರೋದ್ಧುಂ ಕೇದಾರಂ ಪ್ರಾಪ ಸತ್ವರಮ್**

**ಅರ್ಥ:–** ಪೈರನ್ನು ಮೇಯುತ್ತಿರುವ ಗೋವನ್ನು ತಡೆಯಲು, ಬಡತನದಿಂದ ತೊಂದರೆ ಪಡುತ್ತಿದ್ದ ಆ ಸಾಧ್ವಿಯು ಪತಿಯ ಆಜ್ಞೆಯ ಮೇರಿಗೆ ಗದ್ದೆಗೆ ಆ ಕೂಡಲೇ ಬಂದಳು.

**ಶ್ಲೋಕ:–** **ತದಾ ತತ್ರೈವ ಸುಷುವೇ ಭಾಸ್ಕರಪ್ರಭಮಾತ್ಮಜಮ್ ॥19॥**

**ಅರ್ಥ:–** ಆ ಸಮಯದಲ್ಲಿ ಆ ಸಾಧ್ವಿಯು ಅಲ್ಲಿಯೇ (ಗದ್ದೆಯಲ್ಲಿ) ಸೂರ್ಯನಂತೆ ಪ್ರಕಾಶಮಾನನಾದ ಮಗುವನ್ನು ಹೆತ್ತಳು.

**ಶ್ಲೋಕ:–** **ಜ್ಞಾನದೃಷ್ಟ್ಯೈವ ಗುರುಭಿರ್ವಿಜ್ಞಾತಾರ್ಥೈಃ ಪುರಾಗತೈಃ ।**
**ಪ್ರಸೂತಿಕಾರ್ಯಕುಶಲಾ ನಿಯುಕ್ತಾ ವೃದ್ಧಯೋಷಿತಃ ॥ 20 ॥**

**ಅರ್ಥ:–** ಈ ಮೊದಲೇ ಜ್ಞಾನದೃಷ್ಟಿಯಿಂದ ಎಲ್ಲವನ್ನೂ ತಿಳಿದ ಗುರುಗಳಾದ ವಾಗೀಶತೀರ್ಥ ಯತಿಗಳಿಂದ ಕಳುಹಿಸಲ್ಪಟ್ಟ ಪ್ರಸೂತಿಕಾರ್ಯನಿಪುಣರಾದ ವೃದ್ಧಸ್ತ್ರೀಯರು ಅಲ್ಲಿಗೆ ಬಂದಿದ್ದರು.

**ಶ್ಲೋಕ:–** **ಗುರ್ವಾದೇಶಾದ್ಧರ್ಮಮಯಶರಾವೇಣಾದ್ಭುತಂ ಶಿಶುಮ್ ।**
**ಭೂಮಿಸ್ಪರ್ಶಾತ್ಪುರೈವಾಽಽಶು ಜಗೃಹುಃ ಪೂತದೇಹಿನಮ್ ॥ ॥21॥**

ಅರ್ಥ:– ಗುರುಗಳ ಆದೇಶದಂತೆ ಪರಿಶುದ್ಧದೇಹವುಳ್ಳ ಅದ್ಭುತವಾದ ಮಗುವನ್ನು ಭೂಸ್ಪರ್ಶವಾಗುವ ಮೊದಲೇ ವೃದ್ಧ ಸ್ತ್ರೀಯರು ಸುವರ್ಣಪಾತ್ರೆಯಲ್ಲಿ ಹಿಡಿದರು.

**ಶ್ಲೋಕ:–** **ಸಾಧ್ವೀ ಸಾ ಕ್ಷೇತ್ರಮಧ್ಯೇ ತು ಪ್ರತಿಸೀರಾಂತರೇ ಸ್ಥಿತಾ ।**
**ವೃದ್ಧಾಃ ಪರಿಚರಂತೀಸ್ತಾಃ ಸಂವೀಕ್ಷ್ಯಾಶ್ಚರ್ಯತೋಽಬ್ರವಿತ್ ॥22॥**
**ಕುತೋ ಜವನಿಕಾ ಸೇಯಂ ಪರಿಚಾರಪರಾಯಣಾ: ।**
**ಕುತೋ ಭವತ್ಯೋ ಮಾನ್ಯಾಶ್ಚ ಸಮೇತಾ ದುರ್ಗತಾಮಿತಿ ॥23॥**

ಅರ್ಥ:– ಆ ಸಾಧ್ವಿಯು ಗದ್ದೆ ಮಧ್ಯದಲ್ಲಿ ಬಟ್ಟೆ ಪರದೆ ಹಿಡಿದು ನಿಂತು ಸೇವೆ ಮಾಡುತ್ತಿರುವ ವೃದ್ಧೆಯರನ್ನು ನೋಡಿ ವಿಸ್ಮಿತಳಾಗಿ **"**ಈ ಪರದೆ ಎಲ್ಲಿಂದ ಬಂದಿತು? ಬಡವಳಾದ ನನ್ನ ಪರಿಚಾರಿಕೆಯಲ್ಲಿ ತತ್ಪರರಾದ ಮಾನಿನಿಯರಾದ ನೀವು ಎಲ್ಲಿಂದ ಬಂದಿರುವಿರಿ?**"** ಎಂದು ನುಡಿದಳು.

**ಶ್ಲೋಕ:–** **ಇತಃ ಸಮೀಪೇ ವಾಗೀಶಯೋಗಿಭಿಃ ಸಂಪ್ರಚೋದಿತಾಃ ।**
**ಸೇವಿತುಂ ಭವತೀಂ ಪ್ರಾಪ್ತಾ ಇತ್ಯಾಹುರ್ಗುರುಸತ್ಕೃಪಾಮ್ ॥24॥**

**ಅರ್ಥ:–** ಗುರುಗಳ ಕೃಪಾಕಟಾಕ್ಷವನ್ನು ಹೊಂದಿದ ತಮ್ಮನ್ನು ಸೇವಿಸಲು ಇಲ್ಲಿಯೇ ಸಮೀಪದಲ್ಲಿರುವ ವಾಗೀಶಯೋಗಿಗಳು ನಮ್ಮನ್ನು ಕಳುಹಿಸಿರುತ್ತಾರೆ ಎಂದು ಆ ಸ್ತ್ರೀಯರು ಹೇಳಿದರು.

**ಶ್ಲೋಕ:–** **ತತೋ ವೃದ್ಧಾಭಿರಾನೀತಾ ಸಶಿಶುಸ್ಸಾ ಸರಸ್ವತೀ ।**
**ರಾಮಾಚಾರ್ಯಸ್ತನ್ಮುಖೇನ ಶ್ರುತ್ವಾ ಸರ್ವಂ ಸುವಿಸ್ಮಿತಃ ॥25॥**

**ಅರ್ಥ:–** ಅನಂತರ ವೃದ್ಧಸ್ತ್ರೀಯರಿಂದ ಮಗುವಿನೊಂದಿಗೆ ಕರೆತರಲ್ಪಟ್ಟ ಆ ಸರಸ್ವತಿಯ ಮುಖಾಂತರ ಎಲ್ಲವನ್ನೂ ಕೇಳಿದ ರಾಮಾಚಾರ್ಯರು ಸುವಿಸ್ಮಿತರಾದರು.

**ಶ್ಲೋಕ:–** **ಸ್ವರ್ಣಪಾತ್ರಧೃತಂ ಬಾಲಂ ಗುರೂಣಾಂ ಸನ್ನಿಧೌ ಮುದಾ ।**
**ನ್ಯವೇದಯದಖಿನ್ನಃ ಸನ್ ಗುರುವ್ರೋ ವೀಕ್ಷ್ಯ ಬಾಲಕಮ್ ॥26॥**
**ಭಾವಿವಾಯೋ ನಮಸ್ತುಭ್ಯಮೃಜುವರ್ಯ ಪ್ರಸೀದ ನಃ ।**
**ಇತಿ ಸ್ಮರಂತಶ್ಚಿತ್ತೇನ ಪಸ್ಪೃಶುಃ ಶಿಶುಮಾದರಾತ್ ॥27॥**

ಅರ್ಥ:– ಸ್ವರ್ಣಪಾತ್ರೆಯಲ್ಲಿ ಧಾರಣ ಮಾಡಿದ ಮಗುವನ್ನು ಗುರುಗಳ ಸನ್ನಿಧಿಯಲ್ಲಿ ಖಿನ್ನ ಮನಸ್ಕರಾಗದೆ ಆ ದಂಪತಿಗಳು ಸಂತೋಷದಿಂದಲೇ ತಂದು ಅರ್ಪಿಸಿದರು. ಮಗುವನ್ನು ನೋಡಿ ಗುರುಗಳು "ಭಾವೀ ವಾಯುವೇ! ಋಜುವರ್ಯನೇ! ನಿನಗೆ ನಮಸ್ಕಾರವು ನಮ್ಮನ್ನು ಅನುಗ್ರಹಿಸು" ಎಂದು ಮನಸ್ಸಿನಲ್ಲಿ ಸ್ಮರಿಸುತ್ತಾ ಆ ಮಗುವನ್ನು ಆದರದಿಂದ ಸ್ಪರ್ಶ ಮಾಡಿದರು.

**ಶ್ಲೋಕ:–** **ಶಿಶೋರ್ವಿಯೋಗಮಾಶಂಕ್ಯ ವಿಷಣ್ಣೌ ದಂಪತೀ ತದಾ ।**
**ಪಂಚಾಬ್ಧಮೇತಂ ಪುಷ್ಣೀತಮೇತಲ್ಲೀಲಾ ವಿನೋದಿತೌ ॥28॥**
**ಇತಿ ವಾಗೀಶತೀರ್ಥೋಕ್ತಿಸುಧಾಸಂಜೀವಿತೌ ಗುರೂನ್ ।**
**ಪ್ರಣಮ್ಯ ಶಿಶುಮಾದಾಯ ಗೃಹಂ ವಿವಿಶತುರ್ಮುದಾ ॥29॥**

**ಅರ್ಥ:–** ಆಗ ಶಿಶುವಿನ ವಿಯೋಗವನ್ನು ಶಂಕಿಸಿಕೊಂಡು ದುಃಖಿತರಾದ ದಂಪತಿಗಳಿಗೆ, "ಐದು ವರ್ಷಗಳವರೆಗೆ ಈ ಶಿಶುವನ್ನು ಪೋಷಿಸಿರಿ, ಅವನ ಬಾಲಲೀಲೆಯಿಂದ ಸಂತೋಷಪಡಿರಿ" ಈ ರೀತಿಯಾಗಿ ಹೇಳಿದ ವಾಗೀಶತೀರ್ಥರ ಮಾತುಗಳು ಆದಂಪತಿಗಳಿಗೆ ಅಮೃತ ಸಂಜೀವಿನಿಯಂತಾಯಿತು. ಗುರುಗಳಿಗೆ ನಮಿಸಿ, ಶಿಶುವನ್ನು ಕರೆದುಕೊಂಡು ಸಂತೋಷದಿಂದ ಮನೆಗೆ ತೆರಳಿದರು.

**ಶ್ಲೋಕ:–** **ಶಾಲಿವಾಹಸ್ಯಸುಶಕೇ ಪಕ್ಷಾಕಾಶಯುಗೇಂದುಕೆ ।**
**ಶಾರ್ವರೀವತ್ಸರೇ ಮಾಘೇ ಶುಕ್ಲದ್ವಾದಶಿಕಾತಿಥೌ ॥30॥**
**ಋಜುದೇವಃ ಸ ಲಾತವ್ಯೋ ಧರಣ್ಯಾಮವತೀರ್ಣವಾನ್**

**ಅರ್ಥ:–** ಶಾಲಿವಾಹನಶಕೆ 1402ನೇ ಶಾರ್ವರಿ ಸಂವತ್ಸರದ ಮಾಘ ಶುದ್ಧ ದ್ವಾದಶಿ ತಿಥಿಯಲ್ಲಿ ಆ ಋಜುದೇವತೆಯಾದ ಲಾತವ್ಯರು ಭೂಮಿಯಲ್ಲಿ ಅವತರಿಸಿದರು.

**ಶ್ಲೋಕ:–** **ಏಕಾದಶೇಽನ್ಹಿ ರಾಮಾರ್ಯೋ ಜಾತಕರ್ಮಾದಿ ಕಾರಯನ್ ॥31॥**

**ಅರ್ಥ:–** ಹನ್ನೊಂದನೇ ದಿನ ರಾಮಾಚಾರ್ಯರು ಮಗುವಿಗೆ ಜಾತಕರ್ಮಾದಿಗಳನ್ನು ಮಾಡಿದರು.

**ಶ್ಲೋಕ:–** **ವರಾಹಕೃಪಯಾ ಜಾತಂ ವರಾಹಾಖ್ಯಂ ವ್ಯಧಾತ್ತತಃ ।**

**ಅರ್ಥ:–** ವರಾಹದೇವರ ಕೃಪೆಯಿಂದ ಜನಿಸಿದ ಮಗುವಿಗೆ 'ವರಾಹ' ನೆಂದು ನಾಮಕರಣ ಮಾಡಿದರು.

**ಶ್ಲೋಕ:–** **ಅಮರ್ತ್ಯಲೀಲಂ ಬಾಲಂ ತಂ ಪಂಚಮೇಽಬ್ಧೇ ಪಿತಾ ಮುದಾ ॥32॥**
**ಉಪನಿನ್ಯೇ ಸುಲಗ್ನೇ ಹಿ ಪತ್ನ್ಯಾ ಸಾಕಂ ಸಬಾಂಧವಃ ।**

**ಅರ್ಥ:–** ದೇವತಾ ಲೀಲೆಯುಳ್ಳ ಆ ಬಾಲಕನಿಗೆ ಐದನೇ ವರ್ಷದಲ್ಲಿ ತಂದೆಯಾದ ರಾಮಾಚಾರ್ಯರು ಸುಮುಹೂರ್ತದಲ್ಲಿ ಪತ್ನಿ ಹಾಗೂ ಬಂಧಗಳೊಂದಿಗೆ ಕೂಡಿಕೊಂಡು ಉಪನಯನ ಮಾಡಿದರು.

**ಶ್ಲೋಕ:–** **ತತೋ ಗುರುನಿದೇಶೇನ ಪತ್ನೀಪುತ್ರಾನ್ವಿತೋ ದ್ವಿಜಃ ॥33॥**
**ಸಮಾಗತಃ ಸನ್ನಮಾಮ ಪ್ರೋಕ್ತಶ್ಚೈವಂ ಗುರೂತ್ತಮೈಃ ।**
**ವರಾಹಕರುಣಾಜಾತೋ ವರಾಹಸ್ಯೈವ ಸನ್ನಿಧೌ ॥34॥**
**ತಿಷ್ಠತ್ವಿತಃ ಪರಂ ಹೀತಿ ವಿಷಣ್ಣೋ ಜಾಯಯಾ ದ್ವಿಜಃ ।**

**ಅರ್ಥ:–** ಅನಂತರ ಗುರುಗಳ ಆದೇಶದಂತೆ ಪತ್ನಿ, ಪುತ್ರರೊಂದಿಗೆ ಆಗಮಿಸಿ ನಮಸ್ಕರಿಸಲು ಶ್ರೇಷ್ಠರಾದ ಗುರುಗಳು "ವರಾಹದೇವರ ಕರುಣೆಯಿಂದ ಹುಟ್ಟಿದ ಈ ವರಾಹನು ಇನ್ನು ಮುಂದೆ ವರಾಹನ ಸನ್ನಿಧಿಯಲ್ಲಿಯೇ ಇರುವವನಾಗಲಿ" ಎಂದು ನುಡಿದರು. ಇದನ್ನು ಕೇಳಿದ ರಾಮಾಚಾರ್ಯರಿಗೆ ದುಃಖವಾಯಿತು.

**ಶ್ಲೋಕ:–** **ಅತ್ರೈವ ವಸತಂ ಬಾಲವೀಕ್ಷಣಾನಂದಿತೌ ಸದಾ ॥35॥**
**ಇತಿ ಗುರುವರವಾಚಾ ದಂಪತೀ ಹೃಷ್ಟಚಿತ್ತೌ**
**ಯತಿವರಸವಿಧೇ ತೌ ಬಾಲವಕ್ತ್ರೇಂದು ದೃಷ್ಟ್ವಾ ।**

ಕಿಟವರಪದಸೇವಾತತ್ಪರೌ ಶ್ಲಾಘ್ಯಚರ್ಯೌ
ಕ್ಷಣಮಿವ ಬಹುಕಾಲಂ ನಿನ್ಯತುರ್ದೇವಭಕ್ತೌ ॥36॥

**ಅರ್ಥ:–** "ನೀವು ಕೂಡಾ ಇಲ್ಲಿಯೇ ವಾಸಮಾಡಿ ಬಾಲಕನನ್ನು ನೋಡುತ್ತಾ ಸದಾ ಆನಂದ ಹೊಂದಿರಿ." ಗುರುಗಳ ಈ ಮಾತುಗಳು ಆ ದಂಪತಿಗಳ ಮನಸ್ಸಿಗೆ ಸಂತೋಷವನ್ನುಂಟುಮಾಡಿತು. ವರಾಹದೇವರ ಪಾದಸೇವೆಯಲ್ಲಿ ತತ್ಪರರಾದ; ಶ್ಲಾಘನೀಯ ಆಚರಣೆಯುಳ್ಳ ದೇವಭಕ್ತರಾದ ಆ ದಂಪತಿಗಳು ಚಂದ್ರನಂತೆ ಮುಖವುಳ್ಳ ಬಾಲಕನ ನೋಟದಿಂದ ಬಹುಕಾಲವನ್ನು ಕ್ಷಣಕಾಲದಂತೆ ಕಳೆದವರಾದರು.

**ಶ್ಲೋಕ:–** ಇತಿ ಶ್ರೀ ವೇದನಿಧಿತೀರ್ಥಾಂತೇ ವಾಸಿ ರಾಮಚಂದ್ರಾಚಾರ್ಯ ವಿರಚಿತೇ
ಶ್ರೀ ವಾದಿರಾಜಗುರುವರಚರಿತಾಮೃತೇ ಪ್ರಥಮಬಿಂದುಃ ಸಮಾಪ್ತಃ ॥

**ಅರ್ಥ:–** ಇಲ್ಲಿಗೆ ಶ್ರೀ ವೇದನಿಧಿತೀರ್ಥರ ಶಿಷ್ಯರಾದ ರಾಮಚಂದ್ರಾಚಾರ್ಯರಿಂದ ರಚಿತವಾದ ಶ್ರೀ ವಾದಿರಾಜಗುರುವರಚರಿತಾಮೃತದಲ್ಲಿ ಪ್ರಥಮ ಬಿಂದುವು ಮುಗಿಯಿತು.

## ॥ ದ್ವಿತೀಯ ಬಿಂದುಃ ॥

॥ ಶ್ರೀ ವಾರಿರಾಜ ಪೂಜ್ಯ ಚರಣಃ ಪ್ರಸೀದತಾಮ್ ॥

**ಶ್ಲೋಕ:–** ಶ್ರೀ ವಾಗೀಶಮುನೀಂದ್ರಾಣಾಂ ಸಕಾಶೇಽಘವಿನಾಶಕೇ ।
ಶ್ರೀನಿವಾಸಾಭಿದಃ ಕಶ್ಚಿತ್ಪೂರ್ವಬಂಧುರಭೂತ್ಕಿಲ ॥1॥

**ಅರ್ಥ:–** ಪಾಪಪರಿಹಾರಕ ಶ್ರೀವಾಗೀಶಮುನಿಗಳ ಸಮೀಪದಲ್ಲಿ ಶ್ರೀನಿವಾಸನೆಂಬ ಹೆಸರುಳ್ಳ ಅವರ ಪೂರ್ವಾಶ್ರಮ ಬಂಧುಗಳೊಬ್ಬರು ಇದ್ದರು.

**ಶ್ಲೋಕ:–** ವಿನಷ್ಟಪುತ್ರಸ್ವಜನೋ ವಿರಕ್ತೋ ವಾರ್ಧಕೇಽಭವತ್ ।
ಕಾವ್ಯತರ್ಕವಿನೋದೀ ಚ ಮಾಧ್ವರಾದ್ದಂತ ಕೋವಿದಃ ॥2॥

**ಅರ್ಥ:–** ಮಗನನ್ನು ಸ್ವಬಾಂಧವರನ್ನು ಕಳೆದಕೊಂಡ ಅವರು ವೈರಾಗ್ಯಶಾಲಿಗಳಾಗಿ ವೃದ್ಧರಾಗಿದ್ದರು. ಅವರು ಕಾವ್ಯ, ತರ್ಕ, ವಿನೋದಿ ಹಾಗೂ ಮಧ್ವಶಾಸ್ತ್ರಗಳಲ್ಲಿ ಪಂಡಿತರಾಗಿದ್ದರು.

**ಶ್ಲೋಕ:–** ಆತ್ಮಪಾವನ ಹೇತೋಸ್ತು ಯತಿತ್ವಂ ಪ್ರಾರ್ಥಯದ್ಗುರೂನ್ ।
ತತ್ಪ್ರಾರ್ಥಿತಾಶ್ಚ ವಾಗೀಶಾಸ್ತಸ್ಮೈ ಸನ್ಯಾಸಸದ್ವ್ರತಮ್ ॥3॥

**ಅರ್ಥ:–** ಆತ್ಮೋದ್ಧಾರಕ್ಕಾಗಿ ಯತ್ಯಾಶ್ರಮ ನೀಡಬೇಕೆಂದು ಗುರುಗಳನ್ನು ಪ್ರಾರ್ಥಿಸಿದರು. ಯತ್ಯಾಶ್ರಮವನ್ನು ಪ್ರಾರ್ಥಿಸಿದ ಅವರಿಗೆ ಆ ಕೂಡಲೇ ವಾಗೀಶತೀರ್ಥರು ಸನ್ಯಾಸವನ್ನು ನೀಡಿದರು.

**ಶ್ಲೋಕ:–** ದತ್ವಾ ವಿದ್ಯಾನಿಧಿಂ ನಾಮ್ನಾ ಖ್ಯಾಪಯಾಮಾಸುರಾದೃತಾಃ ।
ವರಾಹಾಖ್ಯಂ ಬಾಲಮೇನಂ ತಚ್ಛಿಷ್ಯಂ ವ್ಯದಧುಃ ಕಿಲ ॥4॥

**ಅರ್ಥ:–** ವಿದ್ಯಾನಿಧಿ ಎಂಬ ಹೆಸರನ್ನು ನೀಡಿ, ಪ್ರೀತಿಸಲ್ಪಟ್ಟ ಅವರನ್ನು ಪ್ರಖ್ಯಾತಿಗೊಳಿಸಿದರು. ವರಾಹನೆಂಬ ಹೆಸರಿನ ಈ ಬಾಲಕನನ್ನು ಅವರ (ವಿದ್ಯಾ) ಶಿಷ್ಯರನ್ನಾಗಿ ಮಾಡಿದರು.

**ಶ್ಲೋಕ:–** ಜನ್ಮತಃ ಸರ್ವವೇತ್ತಾಽಯಂ ಮಾನುಷ್ಯಂ ಹಿ ವಿಡಂಬಯನ್ ।
ಸಕೃದುಕ್ತಾದ್ಗುರೋರ್ವಾಕ್ಯಾದಧಿಕಂ ಜಗೃಹೇ ಸ್ವತಃ ॥5॥

**ಅರ್ಥ:–** ಹುಟ್ಟುವಾಗಲೇ ಸರ್ವವನ್ನೂ ತಿಳಿದ ಈ ಬಾಲಕನು ಮಾನುಷತ್ವವನ್ನು ಅನುಕರಣೆ ಮಾಡುತ್ತಾ ಗುರುಮುಖದಿಂದ ಒಂದು ಸಲ ಉಕ್ತವಾದ ವಾಕ್ಯದಿಂದ ಅಧಿಕ ವಿಷಯವನ್ನು ಸ್ವತಃ ಗ್ರಹಿಸುತ್ತಿದ್ದನು.

**ಶ್ಲೋಕ:–** ಅನನ್ಯಸಾಧಾರಣಬುದ್ಧಿಶಕ್ತಿರ್ವರಾಹನಾಮಾಽಖಿಲ ತತ್ವವೇದೀ ।
ಸನ್ಯಾಸದೀಕ್ಷಾವಹನೇಪ್ಸಯಾಽಽಜ್ಞಾಂ ವಾಗೀಶತೀರ್ಥಾಜ್ಜಗೃಹೇ ಸುನಮ್ರಃ ॥6॥

**ಅರ್ಥ:–** ಅಸಾಧಾರಣಬುದ್ಧಿಶಾಲಿಯಾದ ಎಲ್ಲ ತತ್ವಗಳನ್ನೂ ತಿಳಿದ ವರಾಹನು ಸನ್ಯಾಸದೀಕ್ಷೆ ಪಡೆಯಬೇಕೆಂಬ ಅಪೇಕ್ಷೆಯಿಂದ ವಾಗೀಶತೀರ್ಥರಲ್ಲಿ ನಮ್ರಯುತನಾಗಿ ಪ್ರಾರ್ಥಿಸಿದನು.

**ಶ್ಲೋಕ:–** **ಸ್ವವಂಶಮುಕ್ತಾಮಣಿರೇಕ ಏವ ಸುತೋಯತಿಃಸ್ಯಾತ್ಸ್ವಕುಲಂ ವಿನಶ್ಯೇತ್।**
**ಇತ್ಥಂ ವಿಷಣ್ಣೌ ದ್ವಿಜದಂಪತೀ ತೌವಾಗೀಶಯೋಗಿ ದಯಮಾನ ಊಚೇ॥7॥**
**ಮಾಭೈಷ್ಟಮೇತತ್ಸುತತುಲ್ಯರೂಪೋ ದ್ವಿತೀಯಪುತ್ರೋ ಭವಿತೇತಿ ತತ್ರ ।**
**ಪಶ್ಚಾತ್ತಯೋಃ ಸೂನುರಭೂದ್ವರಾಹತುಲ್ಯಾತುಕೃತಿಸ್ತೋಷಕರಃ ಸ್ವಪಿತ್ರೋ ॥8॥**

**ಅರ್ಥ:–** ತಮ್ಮ ವಂಶಕ್ಕೆ ಮುತ್ತಿನ ಮಣಿಯಂತಿರುವ ಒಬ್ಬನೇ ಮಗನು ಯತ್ಯಾಶ್ರಮ ಸ್ವೀಕರಿಸಿದರೆ ತಮ್ಮ ಕುಲನಾಶವಾಗುವುದು, ಎಂಬುದಾಗಿ ದುಃಖಿತರಾದ ಆ ದ್ವಿಜ ದಂಪತಿಗಳಿಗೆ ದಯಾವಂತರಾದ ವಾಗೀಶಯೋಗಿಗಳು ಹೇಳಿದರು "ಹೆದರಬೇಡಿರಿ ಈ ಪುತ್ರನಿಗೆ ಸದೃಶನಾದ ಎರಡನೇ ಮಗನು ಹುಟ್ಟುವನು" ಎಂದರು. ಅವರು ನುಡಿದಂತೆಯೇ ಕೆಲವು ಕಾಲದ ನಂತರ ಭೂವರಾಹನಂತೆ ರೂಪವುಳ್ಳ, ತನ್ನ ತಾಯಿ ತಂದೆಗೆ ಸಂತೋಷಕಾರಕನಾದ ಮಗನು ಹುಟ್ಟಿದನು.

**ಟಿಪ್ಪಣಿ:–** ಮುಂದೆವಾದಿರಾಜರ ಪೂರ್ವಾಶ್ರಮ ತಮ್ಮಂದಿರು ಭಂಡಾರಕೇರಿ ಮಠದ ಶ್ರೀಗಳಿಂದ ಆಶ್ರಮ ಪಡೆದು 'ಸುರೋತ್ತಮ ತೀರ್ಥ'ರೆಂದು ಪ್ರಖ್ಯಾತರಾದರು. ಇವರು ವಾದಿರಾಜರಲ್ಲಿ ವ್ಯಾಸಂಗಮಾಡಿ ಶ್ರೇಷ್ಠ ಜ್ಞಾನಿಗಳಾದರು. ವಾದಿರಾಜರ ಯುಕ್ತಿಮಲ್ಲಿಕೆ ಗ್ರಂಥಕ್ಕೆ ಟೀಕೆ ಬರೆದಿರುವರು.

**ಶ್ಲೋಕ:–** **ಅಷ್ಟಮೇಽಬ್ಧೇ ವರಾಹೋಽಸೌ ವಾಗೀಶಮುನಿಶೇಖರೈಃ ।**
**ಸನ್ಯಾಸದೀಕ್ಷಾಪಾತ್ರಂಸ ಕಾರಿತಸ್ತುಷ್ಟಿ ಮಾದಧೌ ॥9॥**

**ಅರ್ಥ:–** ಸನ್ಯಾಸ ದೀಕ್ಷೆಗೆ ಪಾತ್ರನಾದ ವರಾಹನಿಗೆ ಎಂಟನೆಯ ವರ್ಷದಲ್ಲಿ ವಾಗೀಶ ಮುನಿವರ್ಯರು ಸನ್ಯಾಸವನ್ನು ಕೊಟ್ಟು ಸಂತೋಷಗೊಂಡರು.

**ಶ್ಲೋಕ:–** **ಭವಿತಾಽಖಿಲವಾದೀಂದ್ರದರ್ಪಹಂತಾ ಯತೀಶ್ವರಃ ।**
**ಇತ್ಯತೋ ವಾದಿರಾಜಾಖ್ಯಾಂ ಲಂಬಿತಃ ಸದ್ಗುರೂತ್ತಮೈಃ ।**
**ರಂಜನಾದ್ಗುರುಷೂಚ್ಚತ್ವಾದ್ಗುರುರಾಡಿತಿ ಚೇರಿತಃ ॥10॥**

**ಅರ್ಥ:–** ಸಮಸ್ತ ಶ್ರೇಷ್ಠವಾದಿಗಳ ಗರ್ವವನ್ನು ನಾಶಮಾಡುವ ಯತೀಶ್ವರನಾಗುವನು ಎಂದು "ವಾದಿರಾಜ"ನೆಂಬ ಹೆಸರು ಸದ್ಗುರು ಶ್ರೇಷ್ಠರಾದ ವಾಗೀಶರಿಂದ ಇಡಲ್ಪಟ್ಟಿತು. ಮತ್ತು ಸಂತೋಷವನ್ನುಂಟು ಮಾಡುವುದರಿಂದಲೂ ಗುರುಗಳಲ್ಲಿ ಉಚ್ಚನಾದುದರಿಂದಲೂ' ಗುರುರಾಜ'ನೆಂದು ಕರೆಯಲ್ಪಟ್ಟಿತು.

**ಶ್ಲೋಕ:–** **ತತಶ್ಚ ವಿದ್ಯಾನಿಧಿಯೋಗಿವರ್ಯಾದಾಪ್ತೋಚ್ಚ ವಿದ್ಯೋ ಹ್ಯನವದ್ಯಬೋಧಃ।**
**ವಿದ್ಯಾನಿಧೌ ವೃದ್ಧತಮೇಽಚುತಸ್ಯ ಪದಂ ಗತೆ ಬಾಲಯತೀಶ್ವರೋಽಸೌ॥11॥**
**ವಾಗೀಶಯೋಗೀಂದ್ರ ಮುಖಾದಪಿ ಸ್ಮ ವೇದಾಂತತತ್ತ್ವಂ ಜಗೃಹೇಽಥಮೋದಾತ್ ।**
**ಕಾಲೇಽಸ್ಯ ಮಾತಾ ಸುಷುವೇಽಥ ಬಾಲಂ ರೂಪಾದಿಭಿಃ ಪೂರ್ವಜವನ್ಮನೋಜ್ಞಮ್॥12॥**

**ಅರ್ಥ:–** ನಿರ್ದೋಷವಾದ ಜ್ಞಾನವುಳ್ಳ ಈ ಬಾಲಯತೀಶ್ವರನು ಸನ್ಯಾಸ ಸ್ವೀಕಾರಾನಂತರ ವಿದ್ಯಾನಿಧಿಯೋಗಿವರ್ಯರಿಂದ ಶ್ರೇಷ್ಠವಾದ ವಿದ್ಯೆಯನ್ನು ಪಡೆದನು. ವಿದ್ಯಾನಿಧಿಗಳು ವೃದ್ಧಾಪ್ಯದಿಂದ ಹರಿಪಾದವನ್ನು ಸೇರಲು, ವಾಗೀಶಯೋಗಿ ಶ್ರೇಷ್ಠರ ಮುಖದಿಂದಲೇ ವೇದಾಂತ ತತ್ವವನ್ನು ಸಂತೋಷದಿಂದಲೇ ಸ್ವೀಕರಿಸಿದನು. ಕಾಲಾಂತರದಲ್ಲಿ ತಾಯಿಯಾದ ಗೌರಿದೇವಿಯು ತನ್ನ ಮೊದಲನೆ ಮಗನಂತಹ ರೂಪಾದಿಗಳಿಂದ ಮನೋಹರನಾದ ಪುತ್ರನನ್ನು ಹಡೆದಳು.

**ಶ್ಲೋಕ:–** **ಸ್ವವಂಶಮುಕ್ತಾಮಣಿಮಾಧೃತಾ ಸಾ ಪುಪೋಷವಾಗೀಶವರಾಪ್ತಮೇತಮ್।**
**ಸ ವಾದಿರಾಟ್ ಸದ್ಮಗತೋಽನುಜಾತಂ ದೃಷ್ಟ್ವಾಽನ ಗೃಹ್ಣನ್ನಿಜಮಾತೃತುಷ್ಟ್ಯೈ ॥13॥**
**ವಿಯೋಗದುಃಖಪ್ರಶಮಾಯ ನೈಜಾಂ ಮೂರ್ತಿಂ ದದೌಕಾಂಸ್ಯಮಯೀಂ ಸ್ವಮಾತ್ರೇ।**
**ಮಾತ್ರಾ ಚ ಲಕ್ಷಾಭರಣಾರ್ಪಣಾಯ ಸಂಸೂಚಿತೋಽಂಗೀಕೃತವಾನ್ಸ ಯೋಗೀ॥14॥**

**ಅರ್ಥ:–** ವಾಗೀಶಗುರುಗಳ ವರದಿಂದ ಹುಟ್ಟಿದ, ತಮ್ಮ ವಂಶದ ಮಾಣಿಕ್ಯದಂತೆ ಇರುವ ಮಗನನ್ನು ಗೌರಿದೇವಿಯು ಪ್ರೀತಿಯಿಂದ ಚೆನ್ನಾಗಿ ಪೋಷಿಸುತ್ತಿದ್ದಳು. ವಾದಿರಾಜರು ಮನೆಗೆ ಹೋಗಿ ಅನುಜನನ್ನು ನೋಡಿ ಅವನನ್ನು ಅನುಗ್ರಹಿಸುತ್ತಾ, ತನ್ನ ವಿಯೋಗದ ದುಃಖವನ್ನು ಪರಿಹರಿಸಿ ತನ್ನ ತಾಯಿಗೆ ಸಂತೋಷವನ್ನುಂಟು ಮಾಡಲು ಕಂಚಿನಲ್ಲಿ ತಯಾರಿಸಿದ ತನ್ನ ವಿಗ್ರಹವನ್ನು ತನ್ನ ತಾಯಿಗೆ ಕೊಟ್ಟರು.

(ತಾನು ಹೇಳಿಕೊಂಡ ಹರಕೆಯನ್ನು ತೀರಿಸಲು) ಲಕ್ಷಾಭರಣವನ್ನು ಅರ್ಪಿಸಲು ತಾಯಿಯು ಸೂಚಿಸಿದಾಗ. ವಾದಿರಾಜಯೋಗಿಗಳು (ತಾವು ಅದನ್ನು ಸಮರ್ಪಿಸುವದಾಗಿ) ಒಪ್ಪಿಕೊಂಡರು.

**ಶ್ಲೋಕ:–** **ವಾಗೀಶಯೋಗೀಶ ನಿದೇಶಮಾಪ್ಯ ಸ ವಾದಿರಾಜೋಽಖಿಲದೇಶಚಾರೀ।**
**ಕ್ಷೇತ್ರಾಣಿ ತೀರ್ಥಾನಿ ನಿಷೇವಮಾಣೋ ವಾದೀಭಸಿಂಹೋ ಯಶಸಾ ಬಭಾಜೇ॥15॥**

**ಅರ್ಥ:–** ತಮ್ಮ ಗುರುಗಳಾದ ವಾಗೀಶಯೋಗಿಗಳಿಂದ ಅಪ್ಪಣೆ ಪಡೆದ ಆ ವಾದಿರಾಜರು ಸಮಸ್ತದೇಶಗಳನ್ನು ಸಂಚರಿಸುತ್ತಾ, ಸಮಸ್ತಕ್ಷೇತ್ರಗಳನ್ನೂ, ತೀರ್ಥಗಳನ್ನು ಸೇವಿಸುತ್ತಾ ವಾದಿಗಳೆಂಬ ಗಜಗಳಿಗೆ ಸಿಂಹಪ್ರಾಯರಾಗಿ ಯಶಸ್ಸನ್ನು ಗಳಿಸಿದರು.

**ಶ್ಲೋಕ:–** **ಸ್ವದೃಷ್ಟಕ್ಷೇತ್ರತೀರ್ಥಾದಿ ಮಹಾತ್ಮಸ್ಯಾವ ಬೋಧಕಮ್ ।**
**ತೀರ್ಥಪ್ರಬಂಧಂ ಕೃತವಾನ್ ಪಠತಾಮಘನಾಶನಮ್ ॥ 16॥**

**ಅರ್ಥ:–** ವಾದಿರಾಜರು ತಾವು ಸಂಪರ್ಕಸಿದ ತೀರ್ಥಕ್ಷೇತ್ರಾದಿಗಳ ಮಹಾತ್ಮ್ಯೆಯನ್ನು ಬೋಧಿಸುವ, ಪಠಿಸುವವರ ಪಾಪವನ್ನು ಕಳೆವ ತೀರ್ಥ ಪ್ರಬಂಧ (ಎಂಬ ಕಾವ್ಯವನ್ನು) ರಚಿಸಿದರು.

**ಶ್ಲೋಕ:–** **ಪಠನಾದ್ಯಸ್ಯ ತೀರ್ಥಾದಿಸೇವನಾಲ್ಲಭ್ಯಮಂಜಸಾ ।**
**ಸುಕೃತಂ ಜನತಾಯಾಃ ಸ್ಯಾತ್ತಂ ಸ್ತೋತುಂ ಕೋಽನುಶಕ್ನುಯಾತ್ ॥17॥**

**ಅರ್ಥ:–** (ಆ ತೀರ್ಥ ಪ್ರಬಂಧ ಕಾವ್ಯದ ಮಹಿಮೆ ಎಂತಹದು!) ತೀರ್ಥಾದಿಗಳನ್ನು ಸೇವಿಸುವ ಜನರಿಗೆ ಎಷ್ಟು ಪುಣ್ಯ ಬರುತ್ತದೋ ಅಷ್ಟು ಪುಣ್ಯ ಪಠಿಸುವವರಿಗೆ ಹುಟ್ಟಿಸುವಂತಹದು. ಅದರ ಮಹಿಮೆಯನ್ನು ಪ್ರಶಂಸಿಸಲು ಯಾರು ಸಮರ್ಥರಾದಾರು?

**ಶ್ಲೋಕ:–** **ಕ್ವಚದ್ವಿವಾಹಸಂರಂಭೇ ವರೋಷ್ಣೀಷಾಂತರಂ ವಿಶನ್।**
**ದುಷ್ಟಾಹಿರ್ವರಮೂರ್ಧಾನಂ ದಷ್ಟವಾನ್ಕಷ್ಟಮಾಪತತ್ ॥18॥**

**ಅರ್ಥ:–** ವಿವಾಹಸಮಾರಂಭ ಒಂದರಲ್ಲಿ ವರನ ಪೇಟವನ್ನು ಪ್ರವೇಶಿಸಿದ ದುಷ್ಟ ಹಾವು ವರನ ಶಿರಸ್ಸನ್ನು ಕಚ್ಚಿತು. ಕಷ್ಟ ಒದಗಿತು.

**ಶ್ಲೋಕ:–** **ಕರ್ತವ್ಯಮೂಢಃ ಕ್ಷೇತ್ರೇಶೋ ವಧೂತಾತಃ ಸಮೀಪಗಾನ್ ।**
**ವಾದಿರಾಜಗುರೂನ್ ಶ್ರುತ್ವಾ ಶುಚಾ ಶರಣಮಾಗತಃ ॥19॥**

**ಅರ್ಥ:–** ಏನು ಮಾಡಬೇಕೆಂದು ತೋಚದಂತಾದ ವಧುವಿನ ತಂದೆಯು, ಸಮೀಪದಲ್ಲಿ ಶ್ರೀ ವಾದಿರಾಜಗುರುಗಳು ಇರುವರೆಂದು ಅರಿತು, ಕೂಡಲೇ ಅವರಿಗೆ ಶರಣು ಹೊಂದಿದನು.

**ಶ್ಲೋಕ:–** **ಕೃಪಯಾ ಗುರುರಾಟ್ತೀರ್ಥಂ ತತ್ರಾಽಽನೀತಶವಂ ಪ್ರತಿ ।**
**ಸಂಪ್ರೋಕ್ಷ್ಯ ಜೀವಯಾಮಾಸ ವರಂ ಬಂಧುಜನೈಸ್ಸಹ ॥20॥**

**ಅರ್ಥ:–** ಬಂಧು ಜನರೊಂದಿಗೆ, ಕರುಣೆಯಿಂದ ಗುರುರಾಜರು ತೀರ್ಥವನ್ನು ಅಲ್ಲಿಗೆ ತಂದು ಶವಕ್ಕೆ ಪ್ರೋಕ್ಷಿಸಿ ವರನನ್ನು ಬದುಕಿಸಿದರು.

**ಶ್ಲೋಕ:–** **ವಧೂವರಶುಭಾರ್ಥಂ ಸ ಲಕ್ಷ್ಮೀಶೋಭನಗೀತಕಮ್ ।**
**ಸ್ವಕೃತಂ ಬೋಧಯಾಮಾಸ ತದದ್ಯಾಪಿ ಹಿ ಗೀಯತೇ ॥ 21॥**

**ಅರ್ಥ:–** ವಧೂವರರ ಶ್ರೇಯಸ್ಸಿಗಾಗಿ ಅವರು ತಾವೇ ರಚಿಸಿ ಲಕ್ಷ್ಮೀ ಶೋಭನವೆಂಬ ಕೀರ್ತನೆಯನ್ನು ಬೋಧಿಸಿದರು. ಆ ಕೀರ್ತನೆಯು ಅಂದಿನಿಂದ ಈಗಲೂ (ವಿವಾಹ ಕಾಲದಲ್ಲಿ) ಹಾಡಲ್ಪಡುತ್ತದೆ.

**ಶ್ಲೋಕ:–** **ಕುಂಭಘೋಣಂಗತಃ ಶಾರ್ಙಪಾಣಿಂ ನತ್ವಾ ಸಭಾಸ್ವಸೌ ।**
**ಪ್ರಾಜ್ಞ್ಯಾನ್ಪ್ರಾಜ್ಞಾನ್ವಿರಾಜಿತ್ಯ ಸ್ವಶಿಷ್ಯಾನಕರೋತ್ ಪ್ರಭುಃ ॥ 22॥**

**ಅರ್ಥ:–** ಕುಂಭಘೋಣಕ್ಕೆ ಹೋದ ಪ್ರಭುಗಳಾದ ಶ್ರೀ ವಾದಿರಾಜರು ಶಾರ್ಙಪಾಣಿಯನ್ನು ನಮಿಸಿ ಅಲ್ಲಿ ಸೇರಿದ ವಿದ್ವಾಂಸರ ಸಭೆಯಲ್ಲಿ ಅನೇಕ ಪಂಡಿತರನ್ನು ವಾದದಲ್ಲಿ ಸೋಲಿಸಿ ತಮ್ಮ ಶಿಷ್ಯರನ್ನಾಗಿ ಮಾಡಿಕೊಂಡರು.

**ಟಿಪ್ಪಣಿ:–** ಕುಂಭಘೋಣದಲ್ಲಿ ಪ್ರಸಿದ್ಧ ಶಾರ್ಙಪಾಣಿ ದೇವರಿಗೆ ವಾದಿರಾಜರು ತೀರ್ಥಪ್ರಬಂಧದಲ್ಲಿ ಸ್ತುತಿಸಲ್ಪಟ್ಟ ಶ್ಲೋಕದಿಂದಲೇ ಇಂದೂ ಕೂಡ ಆರತಿ ಮಾಡುತ್ತಾರೆ.

**ಶ್ಲೋಕ:–** **ತತೋ ವೆಂಕಟಶೈಲಸ್ಯ ನಿಕಟಂ ಪ್ರಾಪ್ತವಾನ್ಕೃತೀ ।**
**ಶಿಲಾಸೋಪಾನರೂಪೇಣ ದೇವಮಾವೇಕ್ಷ್ಯ ದಿವ್ಯದೃಕ್ ॥23॥**
**ಜಾನುಭ್ಯಾಮೇವ ಶೈಲೇಂದ್ರಮಾರುರೋಹ ಮಹಾಬಲಃ ।**

**ಶ್ರೀನಿವಾಸಂ ನಿರೀಕ್ಷ್ಯಾಥ ಸಾಲಿಗ್ರಾಮ ಸುಮಾಲಿಕಾಮ್ ॥24॥**
**ಅರ್ಪಯಾಮಾಸ ಸಾ ಮಾಲಾ ತತ್ಕಂಠೇऽದ್ಯಾಪಿ ರಾಜತೇ ।**

**ಅರ್ಥ:–** ಅನಂತರ ವೆಂಕಟಾದ್ರಿ (ತಿರುಪತಿ) ಸಮೀಪಕ್ಕೆ ಜ್ಞಾನಿಗಳಾದ ವಾದಿರಾಜರು ಬಂದರು. ದಿವ್ಯ ದೃಷ್ಟಿಯುಳ್ಳ ಅವರು ಕಲ್ಲು ಮೆಟ್ಟಲಿನ ರೂಪದಲ್ಲಿ ಪರಮಾತ್ಮನನ್ನು ನೋಡಿ, ಮಹಾಬಲಶಾಲಿಗಳಾದ ಅವರು ಮೊಳಕಾಲಿನಿಂದಲೇ ಬೆಟ್ಟವನ್ನು ಏರಿದರು ನಂತರ ಶ್ರೀನಿವಾಸನ ದರ್ಶನ ಮಾಡಿ (ತಾವು ತಂದ) ಸಾಲಿಗ್ರಾಮ ಸರವನ್ನು ಸಮರ್ಪಿಸಿದರು. ಆ ಸರವು ಇಂದಿಗೂ (ಶ್ರೀನಿವಾಸನ) ಕಂಠದಲ್ಲಿ ಕಂಗೊಳಿಸುತ್ತದೆ.

**ಶ್ಲೋಕ:–** **ಕ್ವಚಿದ್ದೇಶೇ ಸಂಚರನ್ಸ ಧನಿಕೇನ ಸುತೇಪ್ಸುನಾ ॥25॥**
**ಪ್ರಾರ್ಥಿತಃ ಪ್ರೋಚಿವಾನಸ್ಮಿನ್ ಜನ್ಮನ್ಯೇಷ ಸುದುರ್ಲಭಃ ।**
**ಸಂಚಿತಂ ಧನರಾಶಿಂ ತ್ವಂ ಧರ್ಮಾಯ ವಿನಿಯೋಜಯ ॥26॥**
**ಇತಿ ವಾಚಾ ವಿಷಣ್ಣಸ್ಸ ಧನಿಕಃ ಸಮಯಾಂತರೇ ।**
**ತುರುಷ್ಕಮಂತ್ರವಿಜ್ಞೇನ ಪ್ರದತ್ತಫಲಭಕ್ಷಣಾತ್ ॥27॥**
**ಸ್ವಪತ್ನ್ಯಾಂ ಲಬ್ಧಜನುಷಾ ಪುತ್ರೇಣಾನಂದಭಾಗಭೂತ್ ।**

**ಅರ್ಥ:–** ವಾದಿರಾಜರು ಸಂಚಾರ ಮಾಡುತ್ತಿರುವ ಸಮಯದಲ್ಲಿ ಒಂದು ಊರಲ್ಲಿ ಧನಿಕನೊರ್ವನು ಪುತ್ರ ಸಂತಾನಾಪೇಕ್ಷೆಯುಳ್ಳವನಾಗಿ ಬಂದು (ವಾದಿರಾಜರಲ್ಲಿ) ಪ್ರಾರ್ಥಿಸಲು "ಈ ಜನ್ಮದಲ್ಲಿ ಪುತ್ರ ಸಂತಾನ ದುರ್ಲಭ. ನಿನ್ನಿಂದ ಸಂಗ್ರಹಿಸಲ್ಪಟ್ಟ ಧನರಾಶಿಯನ್ನು ಧರ್ಮಕಾರ್ಯಕ್ಕಾಗಿ ವಿನಿಯೋಗಿಸು" (ಎಂದರು) ಈ ಮಾತುಗಳು ಆ ಧನಿಕನಿಗೆ ದುಃಖವನ್ನುಂಟು ಮಾಡಿತು. ಕೆಲವು ಸಮಯದ ನಂತರ ತುರುಷ್ಕ ಮಂತ್ರ ವಿದ್ಯೆ ಬಲ್ಲವನಿಂದ ಕೊಡಲ್ಪಟ್ಟ ಫಲ ತಿನ್ನುವದರಿಂದ ತನ್ನ ಪತ್ನಿಯಲ್ಲಿ ಹುಟ್ಟಿದ ಗಂಡು ಮಗುವಿನಿಂದ (ಆ ಧನಿಕನು) ಆನಂದವುಳ್ಳವನಾದನು.

**ಶ್ಲೋಕ:–** **ಕಾಲಾಂತರೇ ವಾದಿರಾಜಗುರುರಾಡಾಗತಃ ಪುನಃ ॥28॥**

**ಅರ್ಥ:–** ಕೆಲವು ಸಮಯದ ನಂತರ ಶ್ರೀ ವಾದಿರಾಜಗುರುವರ್ಯರು ಪುನಃ (ಧನಿಕನಿರುವ ಊರಗೆ) ಬಂದರು.

**ಶ್ಲೋಕ:–** **ಧನಿಕೋದಂತಮಾಕರ್ಣ್ಯ ಸಮಾಹ್ವಯತ ತತ್ವವಿತ್ ।**
**ಸ್ವಕೀಯಮನುಜದ್ವಾರಾ ಧನಿಕಂ ಸಕುಟಂಬಕಮ್ ॥29॥**

**ಅರ್ಥ:–** ನಿಜ ವಿಷಯವನ್ನು ತಿಳಿದ ವಾದಿರಾಜರು ಧನಿಕನ ವೃತ್ತಾಂತವನ್ನು ಕೇಳಿ ಕುಟುಂಬ ಸಮೇತನಾಗಿ ಧನಿಕನಿಗೆ ತಮ್ಮ ಬಳಿಗೆ ಬರಲು ಪರಿವಾರ ಜನರ ಮೂಲಕ ಆಮಂತ್ರಿಸಿದರು.

**ಶ್ಲೋಕ:–** **ಸ್ವಪುತ್ರಪತ್ನೀಸಹಿತಸ್ಸ ಆಢ್ಯಕಸ್ಸಮಾಗತಃ ಪುತ್ರಮದರ್ಶಯದ್ಗುರೋಃ।**
**ತಸ್ಮಾದ್ಗುರೋರಪ್ಯಧಿಕಂ ತು ರುಷ್ಕಜಂ ಚಿತ್ತೇ ವಿಜಂತ್ಯಾತ್ತಮನೋರಥೋऽಹಸತ್॥30॥**

**ಅರ್ಥ:–** ಮನೋಭಿಷ್ಟವನ್ನು ಹೊಂದಿದ ಧನಿಕನು (ಗುರುಗಳಿಂದಾಗದ್ದನ್ನು ತುರುಷ್ಕನು ಮಾಡಿ)ದುದರಿಂದ, ತುರುಷ್ಕನು ಗುರುಗಳಿಗಿಂತ ಅಧಿಕನು ಎಂದು ಮನಸ್ಸಿನಲ್ಲಿ ಚಿಂತಿಸಿ, ನಕ್ಕನು.

**ಶ್ಲೋಕ:–** **ನ ಯೊಗ್ಯೋऽಯಂ ತವೇತ್ಯುಕ್ತೋ ಗುರುಣಾ ಧನಿಕಸ್ತದಾ ।**
**ಕುತ ಇತ್ಯಾರ್ತಿಮಾಂಸ್ತರ್ಹಿ ಪಶ್ಯೇತಿ ಯತಿಪುಂಗವಃ ॥31॥**

**ಅರ್ಥ:–** "ಈತನು ನಿಮಗೆ ಯೋಗ್ಯನಲ್ಲ" ಎಂದು ಗುರುಗಳು ಹೇಳಲು ಧನಿಕನು ಆಗ "ತನಗೆ ಈತನಿಂದ ಏನು ತೊಂದರೆ" ಎಂದು ಪ್ರಶ್ನಿಸಲು ಯತಿ ಶ್ರೇಷ್ಠರಾದ ವಾದಿರಾಜರು "ಹಾಗಾದರೆ ನೋಡು" (ಎಂದು ನುಡಿದರು)

**ಶ್ಲೋಕ:–** **ತೀರ್ಥಂ ಬಾಲಾಯ ಚಿಕ್ಷೇಪ ಬಾಲೋ ರೌದ್ರತನುಂ ದಧೌ ।**
**ತದ್ವೀಕ್ಷ್ಯ ಧನಿಕೋ ಭೀತೋ ಮುಮೋಹ ಪತಿತಃ ಕ್ಷಿತೌ ॥32॥**

**ಅರ್ಥ:–** ಬಾಲಕನಿಗೆ ತೀರ್ಥವನ್ನು ಪ್ರೋಕ್ಷಿಸಲು, ಬಾಲಕನು ಭೀಕರಶರೀರವನ್ನು ಧರಿಸಿದನು. ಅದನ್ನು ನೋಡಿ ಧನಿಕನು ಭೀತಿಯಿಂದ ಮೂರ್ಛಿತನಾಗಿ ಭೂಮಿಯ ಮೇಲೆ ಬಿದ್ದನು.

**ಶ್ಲೋಕ:–** **ಚಿರಾದುತ್ಥಾಯ ಸ ಗುರುಂ ಪಪ್ರಚ್ಛಾದರ್ಶನಂ ಶಿಶೋಃ ।**
**ಗುರುರ್ಭೂತಂ ತು ಪಪ್ರಚ್ಛವದ ಕೋऽಸೀತಿ ಸತ್ವರಮ್ ॥33॥**

**ಅರ್ಥ:–** ನಿಧಾನವಾಗಿ ಮೂರ್ಛೆಯಿಂದ ಎದ್ದ ಧನಿಕನು ಗುರುಗಳಿಗೆ "ಮಗುವು ಕಾಣಿಸುವುದಿಲ್ಲ" ಏಕೆಂದು ಕೇಳಲು, ಗುರುಗಳು (ಅಲ್ಲಿದ್ದ) ಭೂತವನ್ನು "ನೀನು ಯಾರು ಆಗಿರುವೆ? ಶೀಘ್ರವಾಗಿ ಹೇಳು" ಎಂದರು.

**ಶ್ಲೋಕ:–** **ಭೂತೋ ಭೀತೋಽವದನ್ಮಂತ್ರವಾದ್ಯಾದೇಶಾದಹಂ ಶಿಶುಃ ।**
**ಭೂತ್ವಾ ಷಡ್ಡಾಯನೋ ಹತ್ವಾ ಪಿತರೌ ತನ್ನಿದೇಶತಃ ॥34॥**
**ಗಂತುಕಾಮಃ ಕೃಪಾಲುಸ್ತ್ವಂ ಮಂತುಂ ಮೇ ಕ್ಷಂತುಮರ್ಹಸಿ ।**
**ಇತಿ ಯಾಚಂತಮೂಚೇಽಥ ತವ ಶಕ್ತಿಂ ದದಾಮ್ಯಹಮ್ ॥35॥**

**ಅರ್ಥ:–** ಭೂತವು ಭಯದಿಂದ "ಮಂತ್ರವಾದಿಯ ಆದೇಶಾನುಸಾರ ನಾನು ಮಗುವಾಗಿದ್ದೇನೆ. ಆರು ವರ್ಷಗಳ ನಂತರ ತಾಯಿ ತಂದೆಗಳನ್ನು ಕೊಂದು ಅವನ ಆಜ್ಞೆಯಂತೆ ಹೋಗಲು ಇಚ್ಛಿಸಿದ್ದೇನೆ. ಕೃಪಾಲುಗಳಾದ ತಾವು ನನ್ನ ಅಪರಾಧವನ್ನು ಕ್ಷಮಿಸಲು ಅರ್ಹರಾಗಿದ್ದೀರಿ" ಎಂದು ನುಡಿಯಲು ಹೀಗೆ ಪ್ರಾರ್ಥಿಸಿದ ಭೂತವನ್ನು ಕುರಿತು "ನಿನಗೆ ನಾನು ಶಕ್ತಿಯನ್ನು ಕೊಡುತ್ತೇನೆ.

**ಶ್ಲೋಕ:–** **ತಂ ಮಂತ್ರಜ್ಞಂ ಕೃತಘ್ನಂ ತ್ವಂ ಹತ್ವಾ ಸ್ವಚ್ಛಂದತೋ ವ್ರಜ ।**

**ಅರ್ಥ:–** ಕೃತಘ್ನನಾದ ಆ ಮಂತ್ರವಾದಿಯನ್ನು ನೀನು ಕೊಂದು ನಿನ್ನಿಷ್ಟ ಬಂದ ಕಡೆಗೆ ಹೋಗು.

**ಶ್ಲೋಕ:–** **ಇತ್ಯಾಶ್ವಾಸ್ಯ ಶ್ರುತೋದಂತಂ ಧನಿಕಂ ಚ ಸಮಾದದೌ ॥36॥**
**ದಶಸಾಹಸ್ರರೂಪ್ಯಾಣಾಂ ಹರ್ತ್ರೇದುರ್ಮಂತ್ರವೇದಿನೇ ।**
**ಕ್ರುದ್ಧ್ಯನ್ಗುರೋರ್ನಿದೇಶೇನ ಸದ್ಧರ್ಮಪರಮೋಽವಸತ್ ॥37॥**

**ಅರ್ಥ:–** ಎಂದು ಆಶ್ವಾಸನೆಯನ್ನು ನೀಡಿ ಗುರುಗಳು ಸಮಾಚಾರವನ್ನು ತಿಳಿದ ಧನಿಕನನ್ನು ಸಮಾಧಾನ ಪಡಿಸಿದರು. ಹತ್ತು ಸಾವಿರ ಚಿನ್ನದ ನಾಣ್ಯವನ್ನು ಹಾಳು ಮಾಡಿದ ಕೆಟ್ಟ ಮಾಂತ್ರಿಕನ ವಿಷಯದಲ್ಲಿ ಸಿಟ್ಟುಗೊಂಡ ಧನಿಕನು (ಅಲ್ಲಿಂದ ಮುಂದೆ) ಗುರುಗಳ ನಿರ್ದೇಶದಂತೆ ಸದ್ಧರ್ಮರತನಾಗಿ ವಾಸ ಮಾಡಿದನು.

**ಶ್ಲೋಕ:–** **ವಿಠ್ಠಲೇಕ್ಷಾತತ್ಪರೇಽಸ್ಮಿನ್ ಗುರೌ ಭೀಮರಥೀತಟೇ ।**
**ನಿಶಿ ಕೇಚಿದ್ದಸ್ಯುವೀರಾ: ಮಠೀಯಾನ್ ರುರುಧುಃ ಕಿಲ ॥38॥**

**ಅರ್ಥ:–** (ಪಂಢರಾಪುರ) ವಿಠ್ಠಲನನ್ನು ನೋಡಲಪೇಕ್ಷೆಯಿಂದ ಗುರುಗಳು ಹೋಗುತ್ತಿರುವಾಗ ಭೀಮರಥಿತೀರದಲ್ಲಿ. ರಾತ್ರಿ ಸಮಯದಲ್ಲಿ, ಶೂರರಾದ ಕೆಲವು ಕಳ್ಳರು ಮಠದ ಪರಿವಾರದವರನ್ನು ತಡೆದರು.

**ಶ್ಲೋಕ:–** **ಮಠೀಯೈರ್ಮನುಜೈಸ್ತ್ಯಕ್ತಂ ಗುರುಂ ನಿರ್ಭೀತಮಾನಸಮ್ ।**
**ದೃಷ್ಟ್ವಾ ಭೀತಾಸ್ತಸ್ಕರಾಸ್ತೇ ತಮೇವ ಶರಣಂ ಯಯುಃ ॥39॥**

**ಅರ್ಥ:–** ಮಠದ ಪರಿವಾರದವರು ಗುರುಗಳನ್ನು ತೊರೆದು ಪಲಾಯನ ಮಾಡಲು ಮಠದ ಪರಿವಾರದವರಿಂದ ಬಿಡಲ್ಪಟ್ಟ ನಿರ್ಭೀತ ಮನಸ್ಸಿನ ಗುರುಗಳನ್ನು ನೋಡಿ ಭೀತಿಯಿಂದ ಕಳ್ಳರೆಲ್ಲರೂ ಅವರಿಗೆ ಶರಣು ಹೊಂದಿದರು.

**ಶ್ಲೋಕ:–** **ಸಾಂತಯಿತ್ವಾ ಗುರುರ್ದಸ್ಯೂನ್ ಯಥೋದಿಷ್ಟಂ ಚಚಾರ ಸಃ ।**
**ವಿಠ್ಠಲಾಧೀಷ್ಠಿತೇ ದೇಶೇ ಗುರೌ ನಿವಸತಿ ಕ್ವಚಿತ್ ॥40॥**

**ಅರ್ಥ:–** ಗುರುಗಳು ಕಳ್ಳರಿಗೆ ಹಿತವಾದ ಮಾತುಗಳಿಂದ ಸ್ವಾಂತನಗೊಳಿಸಿ, ಅವರ ಅಭೀಷ್ಟವನ್ನು ನೆರವೇರಿಸಿದರು. ವಿಠ್ಠಲನ ಆವಾಸ ಸ್ಥಾನವಾದ ಪಂಢರಾಪುರದಲ್ಲಿ ಕೆಲವು ಕಾಲ ಗುರುಗಳು ಆವಾಸ ಮಾಡಿದರು.

**ಶ್ಲೋಕ:–** **ಧನಿಕಕ್ಷೇತ್ರಚಣಕಂ ಭಕ್ಷಯಂತಂ ಸಿತಂ ಹಯಮ್ ।**
**ವೀಕ್ಷ್ಯ ಕ್ಷೇತ್ರೀ ದಾವಯನ್ಸ ದದರ್ಶ ಯತಿಮಂದಿರಮ್ ॥41॥**
**ಪ್ರವಿಶಂತಂ ತುರಂಗಂ ತಂ ಕ್ರುದ್ಧಃ ಕ್ಷೇತ್ರಾಧಿಪೋ ಗುರುಮ್**
**ಭವದ ಶ್ವೇನ ಮೇ ಕ್ಷೇತ್ರಧಾನ್ಯ ಸರ್ವಸ್ವಮಾಹೃತಮ್ ॥42॥**

**ಅರ್ಥ:–** ಪಂಢರಾಪುರದಲ್ಲಿ ಧನಿಕನೊಬ್ಬನು ತನ್ನ ಹೊಲದಲ್ಲಿ ಬಿಳಿಕುದುರೆ ಕಡಲೆ ಮೇಯ್ಯುತ್ತಿರುವದನ್ನು ನೋಡಿ ಹಿಂಬಾಲಿಸಲು ಅದು ಗುರುಗಳು ಆವಾಸವಾಗಿರುವ ಮನೆಯನ್ನು ಪ್ರವೇಶಿಸುತ್ತಿರುವುದನ್ನು ನೋಡಿದನು. ಕೋಪಗೊಂಡ ಹೊಲದೊಡೆಯನು ಗುರುಗಳನ್ನು ಕುರಿತು "ತಮ್ಮ ಕುದುರೆಯಿಂದ ನನ್ನ ಹೊಲದಲ್ಲಿರುವ ಎಲ್ಲಾ ಧಾನ್ಯವು ಭಕ್ಷಿಸಲ್ಪಟ್ಟಿರುತ್ತದೆ."

**ಶ್ಲೋಕ:–** **ಇತ್ಯುಕ್ತೇ ತಂ ಗುರುಃ ಪ್ರಾಹ ಪಶ್ಯ ಮೇಽಶ್ವೋ ನ ವಿದ್ಯತೇ ।**
**ಇತ್ಯಾದಿಷ್ಟೋ ಮಾರ್ಗಮಾಣೋ ನಾಪಶ್ಯತ್ತಂ ಹಯಂ ಸಿತಮ್ ॥43॥**

**ಅರ್ಥ:–** ಈ ರೀತಿಯಾಗಿ ಹೇಳಲು ಗುರುಗಳು "ನಮ್ಮ ಹತ್ತಿರ ಯಾವ ಅಶ್ವವೂ ಇರುವುದಿಲ್ಲ: ಬೇಕಾದರೆ ನೋಡು" ಎಂದರು. ಗುರುಗಳ ಆದೇಶಾನುಸಾರ ಧನಿಕನು ಹುಡುಕಲು ಅಲ್ಲಿ ಬಿಳಿ ಕುದುರೆ ಕಾಣಲಿಲ್ಲ

**ಶ್ಲೋಕ:–** **ವಿಸ್ಮಿತೋಽತ್ರ ಪ್ರವಿಷ್ಟಸ್ಸ ದೃಷ್ಟೋ ನೈವಾವಲೋಕ್ಯತೇ ।**
**ಯೋಗೀಂದ್ರ ಮಮ ಸಂಶೀತಿಂ ಛೇತ್ತುಮರ್ಹಸಿ ಸದ್ಗುರೋ ॥44॥**
**ಇತ್ಯರ್ಥಯಂತಂ ತಂಪ್ರಾಹ ಮದಾರಾಧ್ಯಃ ಕೃಪಾಂ ತ್ವಯೀ ।**
**ಕೃತವಾನ್ಸುಕೃತೀ ತ್ವಂ ಹಿ ಪಶ್ಯ ಕ್ಷೇತ್ರಂ ಪ್ರಗೇ ಪುನಃ ॥45॥**

**ಅರ್ಥ:–** ಇಲ್ಲಿ ಪ್ರವೇಶಿಸಿದ ಕುದುರೆಯು ಕಾಣದೇ ಇರುವುದು ಆಶ್ಚರ್ಯಕರವು! ಹೇ ಸದ್ಗುರುಗಳೇ, ಯೋಗಿವರ್ಯರೇ ನನ್ನ ಸಂಶಯವನ್ನು ನಿವಾರಿಸಲು ನೀವೇ ಸಮರ್ಥರು. ಎಂದು ಧನಿಕನು ಪ್ರಾರ್ಥಿಸಲು, ಅವನನ್ನು ಕುರಿತು ಗುರುಗಳು "ನೀನು ಮಾಡಿದ ಸುಕೃತದಿಂದ ನಮ್ಮ ಆರಾಧ್ಯದೇವರ ಅನುಗ್ರಹ ನಿನ್ನ ಮೇಲಿದೆ. ನಾಳೆ ಬೆಳಿಗ್ಗೆ ಪುನಃ ನೀನು ಹೊಲವನ್ನು ನೋಡು" ಎಂದರು.

**ಶ್ಲೋಕ:–** **ಇತ್ಯುಕ್ತಃ ಪ್ರಾತರಾಯಾತಃ ಸುವರ್ಣಚಣಕೋತ್ಕರೈಃ ।**
**ಪೂರಿತಂ ಕ್ಷೇತಮಾಲೋಕ್ಯ ವಿಸ್ಮಯಾನಂದನಿರ್ಭರಃ ॥46॥**

**ಅರ್ಥ:–** ಈ ರೀತಿಯಾಗಿ ಹೇಳಿಸಿ ಕೊಳ್ಳಲ್ಪಟ್ಟ ಧನಿಕನು ಬೆಳಗಾಗಲು ತನ್ನ ಹೊಲವು ಚಿನ್ನದ ಕಡಲೆ ತೆನೆಯಿಂದ ತುಂಬಿರುವುದನ್ನು ನೋಡಿ ಆಶ್ಚರ್ಯ ಮತ್ತು ಆನಂದದಿಂದ ಭರಿತನಾದನು.

**ಶ್ಲೋಕ:–** **ಗುರುಂ ಶರಣಮಾಪನ್ನಃ ಕ್ಷೇತ್ರಂ ದೇವಾಯ ಸೋಽರ್ಪಯತ್ ।**
**ತತಃ ಕ್ಷೇತ್ರೇಶಮಾಪೃಚ್ಛ್ಯ ಯಥೇಚ್ಛಂ ಗತವಾನ್ಗುರುಃ ॥47॥**

**ಅರ್ಥ:–** ಆ ಧನಿಕನು ಗುರುಗಳಿಗೆ ಶರಣಾಗತನಾದನು ತನ್ನ ಹೊಲವನ್ನು ಶ್ರೀಗಳ ಪಟ್ಟದ ದೇವರಿಗೆ ಸಮರ್ಪಿಸಿದನು. ಅನಂತರ ಗುರುಗಳು ಪಂಢರಪುರದ ವಿಠ್ಠಲನನ್ನು ಪ್ರಶ್ನೆ ಮಾಡಿ ತಿಳಿದು ಅವನ ಅಪೇಕ್ಷೆಗೆ ಅನುಸಾರವಾಗಿ ಪ್ರಯಾಣಿಸಿದರು.

**ಶ್ಲೋಕ:–** **ತದನು ಯತಿವರೇಣ್ಯಃ ಸಮ್ಭಜನ್ ಕ್ಷೇತ್ರವೃಂದಂ**
**ವಿಜಯನಗರಮಾಗಾತ್ ಸ್ವರ್ಗಭೋಗಾಭಿರಾಮಮ್ ।**
**ಅಥ ನರಪತಿರಾರಾದ್ಯೋಗಿವರ್ಯಾಗತಿಂ ತಾಂ**
**ಶ್ರುತಿಪಥಮುಪನೀತಾಂ ಭೃತ್ಯಕೈರ್ಜ್ಞಾತವಾನ್ಸಃ ॥48॥**

**ಅರ್ಥ:–** ಅನಂತರ ಯತಿಶ್ರೇಷ್ಠರಾದ ವಾದಿರಾಜರು ತೀರ್ಥಕ್ಷೇತ್ರಗಳನ್ನು ಸೇವಿಸುತ್ತಾ ಸ್ವರ್ಗದಂತೆ ಮನೋಹರವಾದ ವಿಜಯನಗರ ರಾಜ್ಯಕ್ಕೆ ಬಂದರು. ಪೂಜಿಸಲು ಯೋಗ್ಯರಾದ ಯೋಗಿವರ್ಯರ ಆಗಮನವನ್ನು ತನ್ನ ಸೇವಕರಿಂದ ರಾಜನು ಕೇಳಿ ತಿಳಿದನು.

**ಶ್ಲೋಕ:–** **ನೃಪತಿರಥ ಸುದೋಲಾಂ ವಾದ್ಯಪೂಗೇನ ಸಾರ್ಧಂ**
**ಗುರುವರಸವಿಧಂ ದ್ರಾಕ್ ಯಾಪಯಾಮಾಸ ತೋಷಾತ್ ।**
**ನೃಪತಿಸಚಿವ ಮುಖ್ಯೈರರ್ಥಿತೋ ಯೋಗಿವರ್ಯಃ**
**ತ್ರಿಭುವನ ಗುರುರೇಷ ಪ್ರಾವಿಶದ್ರಾಜಧಾನೀಮ್ ॥49॥**

**ಅರ್ಥ:–** ಅನಂತರ ರಾಜನು ವಾದ್ಯಸಮೂಹಗಳೊಂದಿಗೆ ಪಲ್ಲಕ್ಕಿಯನ್ನು ಗುರುವರ್ಯರ ಸಮೀಪಕ್ಕೆ ಶೀಘ್ರವಾಗಿ ಸಂತೋಷದಿಂದ ಕಳುಹಿಸಿದನು. ರಾಜ, ಮಂತ್ರಿ ಮೊದಲಾದವರಿಂದ ಪ್ರಾರ್ಥಿತರಾದ ಯೋಗಿವರ್ಯರಿಂದ ಮೂರು ಲೋಕಗಳಿಗೆ ಗುರುಗಳಾದ ವಾದಿರಾಜರು ರಾಜಧಾನಿಯನ್ನು ಪ್ರವೇಶಿಸಿದರು.

**ಶ್ಲೋಕ:–** **ಇತಿ ಶ್ರೀವೇದನಿಧಿತೀರ್ಥಾಂತೇವಾಸಿ ರಾಮಚಂದ್ರಾಚಾರ್ಯವಿರಚಿತೇ**
**ಶ್ರೀವಾದಿರಾಜಗುರುವರಚರಿತಾಮೃತೇ ದ್ವಿತೀಯಬಿಂದುಃ ಸಮಾಪ್ತಃ**

**ಅರ್ಥ:–** ಇಲ್ಲಿಗೆ ಶ್ರೀ ವೇದನಿಧಿತೀರ್ಥರ ಶಿಷ್ಯರಾದ ಶ್ರೀರಾಮಚಂದ್ರಾಚಾರ್ಯ
ರಿಂದ ವಿರಚಿತವಾದ ಶ್ರೀ ವಾದಿರಾಜಗುರುವರ ಚರಿತಾಮೃತದಲ್ಲಿ ದ್ವಿತೀಯ ಬಿಂದು ಮುಗಿಯಿತು.

॥ ತೃತೀಯ ಬಿಂದುಃ ॥

## ॥ ಶ್ರೀ ಗುರುರಾಜಃ ಪ್ರಸೀದತು ॥

**ಶ್ಲೋಕ:– ಅಥೋ ನೃಪಸಭಾಮಧ್ಯೇ ನೃಪತೌ ಸದಸಸ್ಪತೌ ।
ಬಹುಭಿರ್ವಾದಿಭಿಸ್ಸಾರ್ಧಂ ಶಾಸ್ತ್ರವಾದೋಽಭವತ್ಕಿಲ ॥1॥**

**ಅರ್ಥ:–** ಬಳಿಕ ರಾಜಸಭಾ ಮಧ್ಯದಲ್ಲಿ ಸಭಾಪತಿಯಾದ ಹಾಗೂ ಬಹುವಾದಿಗಳೊಂದಿಗೆ ಶಾಸ್ತ್ರ ವಿಷಯವಾದವು ನಡೆಯಿತು.

**ಶ್ಲೋಕ:– ಪ್ರಸಕ್ತೇ ಬಹುಭಿಸ್ತತ್ರ ಪ್ರಸಂಗೇ ವಾದಿರಾಟ್ ಸುಧೀಃ ।
ಸರ್ವಾನುತ್ತರದಾನೇನ ಪ್ರೀಣಯಾಮಾಸ ಪಂಡಿತಾನ್ ॥2॥**

**ಅರ್ಥ:–** ಸಭೆಯಲ್ಲಿ ಬಹಳ ಪ್ರಕರಣಗಳು ಪ್ರಾಪ್ತವಾಗಲು ಜ್ಞಾನಿಗಳಾದ ವಾದಿರಾಜರು ಎಲ್ಲ ಪ್ರಕರಣಗಳಿಗೂ ಸಮರ್ಪಕ ಉತ್ತರ ನೀಡುವುದರ ಮೂಲಕ ಪಂಡಿತರನ್ನು ಸಂತೋಷಗೊಳಿಸಿದರು.

**ಶ್ಲೋಕ:– ಶ್ರೀವೆಂಕಟಪತಿರ್ವೀರಪ್ರತಾಪಸ್ತುಷ್ಟ ಮಾನಸಃ ।
ಪ್ರಸಂಗಾಭರಣಂ ನಾಮ ಬಿರುದಂ ಗುರವೇ ದದೌ ॥3॥**

**ಅರ್ಥ:–** ಸಂತುಷ್ಟ ಮನಸ್ಸುಳ್ಳವನಾದ ಶ್ರೀ ವೀರಪ್ರತಾಪ ವೆಂಕಟಪತಿರಾಜನು ಗುರುಗಳಿಗೆ **"ಪ್ರಸಂಗಾಭರಣಂ"** ಎಂಬ ಬಿರುದನ್ನು ನೀಡಿದನು.

**ಶ್ಲೋಕ:– ತತಃ ಪುಣ್ಯಪುರೀಂ ಪ್ರಾಪ್ತೋ ಭೇರಿ ತಾಡನ ಪೂರ್ವಕಮ್ ।
ಕಾವ್ಯಶ್ರೇಷ್ಠಂ ಮಾಘಕಾವ್ಯಂ ಗಜಮೂರ್ಧನಿ ಪೂಜ್ಯತೇ ॥4॥
ಇತ್ಯಾಘೋಷಿತಮಾಕರ್ಣ್ಯ ಸಭಾಪತಿಮವೋಚತ ।
ಅಸ್ಮತ್ಪುರೇ ಮಹಾಕಾವ್ಯಮೇಕಂ ಶ್ರೇಷ್ಠ ಪ್ರಕಾಶತೇ। ॥5॥**

**ಅರ್ಥ:–** ಅನಂತರ ವಾದಿರಾಜರು ಪುಣೆ ಪಟ್ಟಣಕ್ಕೆ ಆಗಮಿಸಲು ಕಾವ್ಯಗಳಲ್ಲಿ ಮಾಘಕಾವ್ಯವು ಶ್ರೇಷ್ಠವು ಅದನ್ನು ಆನೆಯ ಮೇಲಿಟ್ಟು ಗೌರವಿಸಲಾಗುವುದು ಎಂಬುದಾಗಿ ನಗಾರಿ ಬಾರಿಸುತ್ತಾ ಘೋಷಿಸುತ್ತಿರುವದನ್ನು ಕೇಳಿ ವಾದಿರಾಜರು ಸಭಾಪತಿಯನ್ನುದ್ದೇಶಿಸಿ "ನಮ್ಮ ಊರಲ್ಲಿ ಒಂದು ಮಹಾ ಕಾವ್ಯವು ಪ್ರಖ್ಯಾತವಾಗಿದೆ."

**ಶ್ಲೋಕ:– ದೀಯೇತ ಸಮಯಃ ಕಶ್ಚಿದ್ದರ್ಶಯಿಷ್ಯೇ ಪರೀಕ್ಷ್ಯತಾಮ್ ।
ಅಂಗೀಕುರ್ವತಿವಿಜ್ಞೌಘೇ ಗುರುರೇಕೋನವಿಂಶತಾ ॥6॥
ದಿವಸೈರೇಕದಿವಸೇ ಹ್ಯೇಕಸರ್ಗಕ್ರಮೇಣ ಸಃ ।
ರುಕ್ಮಿಣೀಶಮಹಾಕಾವ್ಯಂ ನಿರ್ಮಮೇ ಸುರಸಾಕರಮ್ ॥7॥**

**ಅರ್ಥ:–** ಕಾಲಾವಕಾಶ್ನಕೊಟ್ಟರೆ ಅದನ್ನು ತೋರಿಸುತ್ತೇವೆ. ವಿದ್ವಾಂಸರ ಸಭೆಯಲ್ಲಿ ಪರೀಕ್ಷಿಸಬಹುದು (ಸಭೆಯು) ಒಪ್ಪಿಕೊಳ್ಳುತ್ತದೆ ಎಂದು ಹೇಳಿದರು.

ಹತ್ತೊಂಬತ್ತು ದಿವಸಗಳಲ್ಲಿ ದಿವಸಕ್ಕೊಂದು ಸರ್ಗದಂತೆ ದೇವತಾಲಕ್ಷಣವುಳ್ಳ **"ರುಕ್ಮಿಣೀಶ ವಿಜಯ"** ವೆಂಬ ಮಹಾಕಾವ್ಯವನ್ನು ಗುರುಗಳಾದ ಶ್ರೀ ವಾದಿರಾಜರು ರಚಿಸಿದರು.

**ಶ್ಲೋಕ:– ಅವೇಕ್ಷಣಾಯ ವಿದುಷಾಂ ಸಂಸದಂ ಪ್ರೈಷಯತ್ಸುಧೀಃ ।
ಪರಿಷತ್ಸಾ ಪರೀಕ್ಷ್ಯಾಥ ವಿಸ್ಮಿತಾನಂದ ಪೂರಿತಾ ॥8॥**

**ಅರ್ಥ:–** ಸುಜ್ಞಾನಿಗಳಾದ ವಾದಿರಾಜರು ವಿದ್ವಾಂಸರ ಸಭೆಗೆ (ರುಕ್ಮಿಣೀಶ ವಿಜಯ ಮಹಾಕಾವ್ಯವನ್ನು) ಅವಲೋಕನೆಗಾಗಿ ಕಳುಹಿಸಿದರು. ಅದನ್ನು ಪರೀಕ್ಷಿಸಿದ ವಿದ್ವಾಂಸರ ಸಭೆಯು ವಿಸ್ಮಯಾನಂದಭರಿತವಾಯಿತು.

**ಶ್ಲೋಕ:– ರುಕ್ಮಿಣೀಶಮಹಾಕಾವ್ಯಮುತ್ತಮಂ ಮಾಘತೋಽಪಿ ಚ ।
ಇತ್ಯಾಘೋಷ್ಯ ಚ ಸಮ್ಮಾನ್ಯ ಪ್ರಾರ್ಚಯತ್ಕವಿಸತ್ತಮಮ್ ॥9॥**

**ಅರ್ಥ:–** ರುಕ್ಮಿಣೀಶವು ಮಹಾಕಾವ್ಯವು, ಮಾಘಕಾವ್ಯಕ್ಕಿಂತಲೂ ಉತ್ತಮವಾದುದು ಎಂಬುದಾಗಿ (ಪಂಡಿತರ ಸಭೆಯು) ಘೋಷಿಸಿ (ಆನೆಯ ಮೇಲಿಟ್ಟು) ಮೆರವಣಿಗೆ ಮಾಡುವ ಮೂಲಕ) ಸನ್ಮಾನಿಸಿ ವಾದಿರಾಜರನ್ನು ಶ್ರೇಷ್ಠಕವಿಗಳೆಂದು ಗೌರವಿಸಿತು.

**ಶ್ಲೋಕ:–** **ಕವೀನಾಂ ಕುಲಮಧ್ಯೇ ಹಿ ತಿಲಕೋಽಯಮಿತಿ ಪ್ರಥಾಮ್ ।**
**ಖ್ಯಾಪಯಾಮಾಸ ವಿದುಷಾಂ ಪರೀಷದ್ಗುಣಮೋದಿನೀ ॥10॥**

**ಅರ್ಥ:–** ಗುಣಗಳನ್ನು ಮೆಚ್ಚಿ ಸಂತೋಷ ಪಡುವ ವಿದ್ವಾಂಸರ ಸಭೆಯು "ಕವಿಗಳ ಕುಲಮಧ್ಯದಲ್ಲಿ ತಿಲಕದಂತಿರುವವರು ಈ ವಾದಿರಾಜರು" ಎಂಬುದಾಗಿ ಪ್ರಸಿದ್ಧಿಪಡಿಸಿತು.

**ಶ್ಲೋಕ:–** **ಕಾಶ್ಯಾಂ ಹಿ ಗಂಗಾಸರಿತಸ್ತಟೇಽಸೌ ನಿಶ್ಯರ್ಚನಾಂ ಶ್ರೀದಯಿತಸ್ಯ ಕೃತ್ವಾ।**
**ಉವಾಸ ತತ್ರೈವ ಸ್ವಕೈರ್ನಿಶೀಥೇ ಗ್ರಾಹಾಸ್ತದಾಽತ್ತುಂ ಪರಿವವ್ರುರಾರಾತ್॥11॥**

**ಅರ್ಥ:–** ಕಾಶಿಯಲ್ಲಿ ಗಂಗಾನದಿಯ ತೀರದಲ್ಲಿ ಒಂದು ರಾತ್ರೆ ಶ್ರೀ ಪತಿಯಾದ ಶ್ರೀ ಭೂವರಾಹನನ್ನು ಪೂಜಿಸಿ, ರಾತ್ರಿ ಅಲ್ಲಿಯೇ ತಮ್ಮ ಪರಿವಾರದವರೊಂದಿಗೆ ವಾದಿರಾಜರು ವಾಸ ಮಾಡಿದರು ಆಗ ಮೊಸಳೆಗಳು ಇವರನ್ನು ತಿನ್ನಲು ಸಮೀಪದಲ್ಲಿ ಸುತ್ತುವರಿದವು.

**ಶ್ಲೋಕ:–** **ಸ್ವರಕ್ಷಣಾಶಕ್ತಿಭಿಯಾ ಯುತಾನ್ ಸರೇಖಾವಿಲೇಖೇನ ನಿಜಾನ್ವರಕ್ಷ ।**
**ನಕ್ರಾಸ್ತು ರೇಖಾಮಭಿಲಂಘಿತುಂ ಹೇ ಹ್ಯಶಕ್ತಿತೋ ಹಂತ ನಿವೃತ್ಯ ಜಗ್ಮುಃ॥12॥**

**ಅರ್ಥ:–** ಗೆರೆಯೊಂದನ್ನು ಎಳೆದು ವಾದಿರಾಜರು ತಮ್ಮ ರಕ್ಷಣೆಯಲ್ಲಿ ಅಶಕ್ತರಾಗಿ ಭಯದಿಂದ ಕೂಡಿದ ತನ್ನವರನ್ನು ರಕ್ಷಿಸಿದರು. ಮೊಸಳೆಗಳಾದರೋ ಗೆರೆ ದಾಟಲು ಅಸಮರ್ಥವಾಗಿ ಹಿಂತಿರುಗಿದವು.

**ಶ್ಲೋಕ:–** **ಇಂದ್ರಪ್ರಸ್ಥೇ ತುರುಷ್ಕೇಂದ್ರ ಮೃತ ಪುತ್ರಸ್ಥಲೋಪರಿ ।**
**ದೇವಪೇಟಿಂ ನ್ಯಧಾದ್ಯೋಗೀ ನಿಷಿದ್ಧೋ ಯದನೈರ್ಹಸನ್ ॥13॥**

**ಅರ್ಥ:–** ಇಂದ್ರಪ್ರಸ್ಥದಲ್ಲಿ (ಇಂದಿನ ದಿಲ್ಲಿ ನಗರದಲ್ಲಿ) ಯೋಗಿಗಳಾದ ವಾದಿರಾಜರು ತುರುಷ್ಕರಾಜನ ಮೃತ ಪುತ್ರನ ಸಮಾಧಿಯ ಮೇಲೆ ತಮ್ಮ ದೇವರ ಪೆಟ್ಟಿಗೆಯನ್ನು ಇಡಲು, ಬೇಡವೆಂದು ಯವನ (ತುರುಷ್ಕನೊಬ್ಬನಿಂದ) ತಡೆಯಲ್ಪಟ್ಟರು. "ರಾಜನಮಗನು ಜೀವಿಸಿರುವುದರಿಂದ ಈ ಸ್ಥಳದಲ್ಲಿ ದೋಷವಿಲ್ಲ"ವೆಂದು ಯತಿಶೇಖರರು ಹೇಳಿದರು. ರಾಜನು ವಿಸ್ಮಿತರಾದ ಸೇವಕರಿಂದ (ಈ ವಿಷಯವನ್ನು) ತಿಳಿದನು.

**ಶ್ಲೋಕ:–** **ಜೀವದ್ರಾಜಾತ್ಮಸ್ಥಾನೇ ನ ದೋಷೋಽಸ್ತೀತಿ ಸೋಽಬ್ರವೀತ್ ।**
**ಯವನೈರ್ವಿಸ್ಮಿತೈ ರ್ಭೂಪೋ ಬೋಧಿತೋಯತಿಶೇಖರ ಮ್ ॥14॥**

**ಅರ್ಥ:–** ಇಂದ್ರಪ್ರಸ್ಥದಲ್ಲಿ (ಇಂದಿನ ದಿಲ್ಲಿ ನಗರದಲ್ಲಿ) ಯೋಗಿಗಳಾದ ವಾದಿರಾಜರು ತುರುಷ್ಕರಾಜನ ಮೃತ ಪುತ್ರನ ಸಮಾಧಿಯ ಮೇಲೆ ತಮ್ಮ ದೇವರ ಪೆಟ್ಟಿಗೆಯನ್ನು ಇಡಲು, ಬೇಡವೆಂದು ಯವನ (ತುರುಷ್ಕನೊಬ್ಬನಿಂದ) ತಡೆಯಲ್ಪಟ್ಟರು. "ರಾಜನಮಗನು ಜೀವಿಸಿರುವುದರಿಂದ ಈ ಸ್ಥಳದಲ್ಲಿ ದೋಷವಿಲ್ಲ"ವೆಂದು ಯತಿಶೇಖರರು ಹೇಳಿದರು. ರಾಜನು ವಿಸ್ಮಿತರಾದ ಸೇವಕರಿಂದ (ಈ ವಿಷಯವನ್ನು) ತಿಳಿದನು.

**ಶ್ಲೋಕ:–** **ಶ್ರೀಮದುಕ್ತಂ ತಥ್ಯಮಸ್ತು ಪರೀಕ್ಷಾ ಕ್ರೀಯತೇ ಮಯಾ ।**
**ಇತ್ಯುಕ್ತ್ವೋತ್ಖಾನಯನ್ಪುತ್ರಂ ಜೀವಂತಂ ವೀಕ್ಷ್ಯ ವಿಸ್ಮಿತಃ ॥15॥**

**ಅರ್ಥ:–** ಶ್ರೀಗಳವರು ಹೇಳಿದ ಮಾತು ಸತ್ಯವಾಗಲಿ, ನನ್ನಿಂದ ಪರೀಕ್ಷಿಸಲ್ಪಡುತ್ತದೆ ಎಂದು ರಾಜನು ಹೇಳಿ, ಸಮಾಧಿಯನ್ನು ಅಗೆಸಿ ಮಗನು ಜೀವಿಸಿರುವುದನ್ನು ನೋಡಿ ವಿಸ್ಮಿತನಾದನು.

**ಶ್ಲೋಕ:–** **ವಂದಸ್ವ ವತ್ಸ ಮಹತಸ್ತವ ಜೀವನದಾನ್ ಗುರೂನ್ ।**
**ಇತ್ಯಾನಮಯ್ಯ ಸ್ವಸುತಂ ಧನರಾಶಿಂ ನ್ಯವೇದಯತ್ ॥16॥**

**ಅರ್ಥ:–** "ವತ್ಸ! ನಿನಗೆ ಜೀವದಾನ ಮಾಡಿದ ಮಹಾಗುರುಗಳಿಗೆ ನಮಸ್ಕಾರ ಮಾಡು" ಎನ್ನುತ್ತಾ ತಾನು ನಮಸ್ಕಾರ ಮಾಡಿ, ತನ್ನ ಪುತ್ರನನ್ನು ಧನರಾಶಿಯನ್ನೂ ಅರ್ಪಿಸಿದನು.

**ಶ್ಲೋಕ:–** **ನಿರಾಕುರ್ವತಿ ಹಂಸೇಂದ್ರೇ ಬಹುಷ್ಟ್ರೈಃ ಪ್ರೇಷಯನ್ನೃಪಃ ।**
**ತತ್ಪ್ರೇಷಿತಂ ದ್ರವ್ಯರಾಶಿಂ ಮುಕ್ತಾರತ್ನಾದಿಕೈರ್ಯುತಮ್ ॥17॥**
**ಗಂಗಾಯಾಂ ಕ್ಷೇಪಯಾಮಾನ ವಿರಕ್ತಕುಲದೀಪಕಃ**

**ಅರ್ಥ:–** ಪರಮಹಂಸರಾದ ವಾದಿರಾಜರು ನಿರಾಕರಿಸಿದರು. (ಆದಾಗ್ಯೂ) ಒಂಟೆಗಳ ಮೇಲೆ ರಾಜನಿಂದ ಕಳುಹಿಸಲ್ಪಟ್ಟ, ಮುತ್ತುರತ್ನಗಳಿಂದ ಕೂಡಿದ ಅಪಾರ ದ್ರವ್ಯರಾಶಿಯನ್ನು ವಿರಕ್ತ ಕುಲದೀಪಕಾರಾದ ಶ್ರೀವಾದಿರಾಜರು ಗಂಗಾನದಿಗೆ ಸುರಿಸಿದರು.

**ಶ್ಲೋಕ:–** **ಪ್ರಯಾಗೇ ಬ್ರಹ್ಮಣಃ ಸಂಧ್ಯಾಮಠೇ ಜಪಪರಸ್ಯ ಹಿ ॥18॥**
**ಮುನಿವೇಷಧರೋ ವ್ಯಾಸಃ ಸಾಕ್ಷಾದ್ದೃಷ್ಟಿಪಥೆ ಸ್ಥಿತ ಃ ।**
**ಮಾತ್ರೋಪಯಾಚಿತಂ ವತ್ಸ ಲಕ್ಷಭೂಷಾ ನಿವೇದನಮ್ ॥19॥**
**ಸುಪುತ್ರೇಣ ತ್ವಯಾ ಕಾರ್ಯಂ ಮಹಾಭಾರತಟೀಕಯಾ ।**
**ಲಕ್ಷಗ್ರಂಥಿ ಪದಾರ್ಥಾನಾಂ ವಿವೃತ್ತ್ಯಾ ಲಕ್ಷಭೂಷಯಾ ॥20॥**
**ಮದರ್ಚನೇನ ಮಾತ್ರೋಕ್ತಂ ಸಾಧಿತಂ ಸ್ಯಾದಿತೀರಿತಃ ।**
**ವ್ಯಾಸಾಜ್ಞಾಂ ಶಿರಸಾ ಧೃತ್ವಾ ಬದರೀಂ ಗತವಾನ್ಮುದಾ ॥21॥**

**ಅರ್ಥ:–** ಪ್ರಯಾಗದ ಸಂಧ್ಯಾಮಠದಲ್ಲಿ ಗುರುಗಳಾದ ವಾದಿರಾಜರು ಜಪಮಾಡುತ್ತಿರುವಾಗ ಮುನಿವೇಷಧಾರಿಗಳಾದ ವೇದವ್ಯಾಸರು ಪ್ರತ್ಯಕ್ಷರಾಗಿ ಎದುರಿಗೆ ಬಂದು ನಿಂತರು "ಹೇ ವತ್ಸ! ತಾಯಿ ಹರಕೆಹೊತ್ತ ಲಕ್ಷಾಭರಣವನ್ನು ಸಮರ್ಪಿಸುವುದು ಸುಪುತ್ರನಾದ ನಿನ್ನ ಕರ್ತವ್ಯವು ಮಹಾಭಾರತಗ್ರಂಥದ ಟೀಕಾರೂಪದಲ್ಲಿ ಒಂದು ಲಕ್ಷ ಕಠಿಣ ಪದಗಳ ಅರ್ಥ ವಿವರಣಾರೂಪವಾದ ಲಕ್ಷಾಲಂಕಾರಗಳಿಂದ ನನ್ನನ್ನು ಪೂಜಿಸುವುದರಿಂದ ತಾಯಿಯು ಹೇಳಿದ ಹರಕೆಯು ತೀರುತ್ತದೆ." ಎಂದು ಹೇಳಿದರು. ವೇದವ್ಯಾಸರ ಆಜ್ಞೆಯನ್ನು ಶಿರಸಾವಹಿಸಿ ಸಂತೋಷದಿಂದ ಬದರಿಕಾಶ್ರಮಕ್ಕೆ ತೆರಳಿದರು.

**ಶ್ಲೋಕ:–** **ಪ್ರಣಮ್ಯ ಮಧ್ವ ಹಂಸೇಂದ್ರಾನ್ ವ್ಯಾಸ ಮಧ್ವ ಪ್ರಚೋದಿತಃ ।**
**ಲಕ್ಷಾಲಂಕಾರಟೀಕಾಂ ಸ ವಿಲಿಖ್ಯಾರ್ಪಯತೇ ಸ್ಮ ಹಿ ॥22॥**

**ಅರ್ಥ:–** (ಬದರಿಯಲ್ಲಿ) ಪರಮಹಂಸರಾದ ಮಧ್ವಾಚಾರ್ಯರಿಗೆ ನಮಸ್ಕರಿಸಿ ವೇದವ್ಯಾಸರು ಹಾಗೂ ಮಧ್ವಾಚಾರ್ಯರಿಂದ ಪ್ರೇರಿತರಾಗಿ ಶ್ರೀ ವಾದಿರಾಜರು ಲಕ್ಷಾಲಂಕಾರವೆಂಬ ಟೀಕಾಗ್ರಂಥವನ್ನು ರಚಿಸಿ (ವೇದವ್ಯಾಸರಿಗೆ) ಅರ್ಪಿಸಿದರು.

**ಶ್ಲೋಕ:–** **ಶ್ರೀಯುಕ್ತಿಮಲ್ಲಿಕಾದೀನಾಂ ಕರಣೇ ವ್ಯಾಸಮಧ್ವಯೋಃ ।**
**ಅನುಜ್ಞಾಂ ಪ್ರಾಪ್ಯ ನತ್ವಾ ಸ ನರನಾರಾಯಣೌ ಮುನೀ ॥23॥**
**ಪ್ರತ್ಯಾವೃತ್ತೋ ದ್ವಾರವತೀಮಗದ್ದೇವಾರ್ಚನೇಚ್ಛಯಾ ।**
**ಷಣ್ಮಾಸೋಪೋಷಣಂ ಕುರ್ವನ್ನತ್ರ ತೇಪೇ ತಪಃ ಪರಮ್ ॥24॥**

**ಅರ್ಥ:–**ಶ್ರೀಯುಕ್ತಿಮಲ್ಲಿಕಾದಿ ಗ್ರಂಥ ರಚಿಸಲು ವ್ಯಾಸಮಧ್ವರಿಂದ ಅಪ್ಪಣೆಯನ್ನು ಪಡೆದು, ಅವರು ನರನಾರಾಯಣಮುನಿಗಳನ್ನು ನಮಸ್ಕರಿಸಿ (ಬದರಿಯಿಂದ) ಹಿಂದಿರುಗಿದರು.

ದ್ವಾರಕಾ ಪಟ್ಟಣಕ್ಕೆ ಬಂದು ವಾದಿರಾಜರು ದೇವತಾರ್ಚನಾ ಇಚ್ಛೆಯಿಂದ ಆರು ತಿಂಗಳು ಉಪವಾಸ ಮಾಡುತ್ತಾ ಶ್ರೇಷ್ಠವಾದ ತಪಸ್ಸನ್ನಾಚರಿಸಿದರು.

**ಶ್ಲೋಕ:–** **ಮಧ್ವಾಷ್ಟಕಂ ತದಾ ತೇನೇ ಭಕ್ತಾಭೀಷ್ಟಾರ್ಥಸಾಧಕಮ್ ।**
**ಕೃಷ್ಣನಾಮಾ ಯತಿಸ್ತತ್ರ ವಸನ್ ಸಂಜ್ವರಪೀಡಿತಃ ॥25॥**

**ಅರ್ಥ:–** ವಾದಿರಾಜರು ಆ ಸಮಯದಲ್ಲಿಯೇ ಭಕ್ತರ ಕಾಮನೆಗಳನ್ನು ಪೂರೈಸುವ "ಮಧ್ವಾಷ್ಟಕ"ವನ್ನು ರಚಿಸಿದರು. ಅಲ್ಲಿಯೇ (ದ್ವಾರಾವತಿಯಲ್ಲಿ) ವಾಸಿಸುತ್ತಿದ್ದ ಕೃಷ್ಣ ಹೆಸರಿನ ಯತಿಗಳೊಬ್ಬರು ಜ್ವರ ಪೀಡಿತರಾಗಿದ್ದರು.

**ಶ್ಲೋಕ:–** **ಶ್ರೀ ವಾದಿರಾಜರಚಿತ ಮಧ್ವಾಷ್ಟಕ ಜಪಾತ್ ಜ್ವರಃ ।**
**ನಶ್ಯೇದಿತಿ ಸ್ವಪ್ನದೃಷ್ಟ್ಯಾ ವಾದಿರಾಜಂ ಸಮಾಶ್ರಯತ್ ॥26॥**

**ಅರ್ಥ:–** ಶ್ರೀ ವಾದಿರಾಜರು ರಚಿಸಿದ ಮಧ್ವಾಷ್ಟಕ ಜಪದಿಂದ ಜ್ವರ ನಾಶವಾಗುವುದೆಂದು ಸ್ವಪ್ನ ಸೂಚನೆಯಿಂದ ತಿಳಿದ ಆ ಯತಿಗಳು ವಾದಿರಾಜರನ್ನೂ ಶರಣು ಹೊಂದಿದರು.

**ಶ್ಲೋಕ:–** **ಶ್ರೀ ವಾದಿರಾಜಯತಿದತ್ತಸುಮಧ್ವಯೋಗಿಸ್ತೋತ್ರೇಣ ತೇನ ಹೃತಸನರಬಾಧಯೇಷಃ ।**
**ಕೃಷ್ಣಾಖ್ಯಭಿಕ್ಷುರವನಾವಟತಿಸ್ಮ ರೂಪೀ ಶ್ರೀವಾದಿರಾಜಮುನಿಕೀರ್ತಿಜಯಧ್ವಜೋವಾ॥27॥**

**ಅರ್ಥ:–** ಶ್ರೀ ವಾದಿರಾಜಯತಿಗಳಿಂದ ಕೊಡಲ್ಪಟ್ಟ ಮಧ್ವಾಚಾರ್ಯರ ಸ್ತೋತ್ರ (ರೂಪವಾದ ಮಧ್ವಾಷ್ಟಕ)ದಿಂದ ಈ ಯತಿಗಳು ಜ್ವರಬಾಧೆಯಿಂದ ಬಿಡುಗಡೆ ಹೊಂದಿದರು. ಕೃಷ್ಣನೆಂಬ ಹೆಸರಿನ ಈ ಯತಿಗಳು, ವಾದಿರಾಜಮುನಿಗಳ ಕೀರ್ತಿಯೆಂಬ ಜಯ ಪತಾಕೆಯ ರೂಪದಲ್ಲಿ ಭೂಮಿಯಲ್ಲಿ ಸಂಚರಿಸುತ್ತಿದ್ದರು.

**ಶ್ಲೋಕ:–** **ಹೃದಯೇ ವಾದಿರಾಜಸ್ಯ ತಪಸ್ಸಕ್ತಸ್ಯ ತತ್ರ ಹಿ ।**
**ಭಾಸಮಾನೋ ಹಯಗ್ರೀವೋ ಗುಹಾಯಾಮತ್ರ ಮೇ ಶಿಲಾ ॥28॥**
**ತಾಮಾನೀಯಾರ್ಚಯ ತ್ವಂ ದ್ರಾಕ್ ಮಮ ಪ್ರೀತಿಂ ಸಮಾರ್ಜಯ ।**

**ಇತ್ಯಾದಿಶದ್ ಗುಹಾಂ ಗತ್ವಾ ಹಯಗ್ರೀವಶಿಲಾಂ ಗುರುಃ ॥29॥**
**ಸೂರ್ಯಾಧಿಕಪ್ರಕಾಶೇನ ರಾಜಂತೀಂ ವೀಕ್ಷ್ಯ ಭಕ್ತಿತಃ ।**
**ನೀತ್ವಾ ನಿತ್ಯಂ ಪೂಜಯನ್ ಸತುತೋಷ ಹರಿಸೇವನೈಃ । ॥30॥**

**ಅರ್ಥ:–** ದ್ವಾರಾವತಿಯಲ್ಲಿ ತಪಸ್ಸನ್ನು ಆಚರಿಸುತ್ತಿದ್ದ ವಾದಿರಾಜರ ಹೃದಯದಲ್ಲಿ ಪ್ರಕಾಶಿಸುತ್ತಿದ್ದ ಹಯಗ್ರೀವನು "ಇಲ್ಲಿ (ಸಮೀಪದಲ್ಲಿರುವ) ಗುಹೆಯಲ್ಲಿ ನನ್ನ ಶಿಲಾ (ರೂಪವಿರುವುದು) ಅದನ್ನು ಶ್ರೀಘ್ರವಾಗಿ ತಂದು ನೀನು ಪೂಜಿಸಿ ನನ್ನ ಪ್ರೀತಿಯನ್ನು ಗಳಿಸು" ಎಂದು ಆಜ್ಞಾಪಿಸಿದನು. ಗುರುಗಳು ಆ ಗುಹೆಗೆ ಹೋಗಿ ಸೂರ್ಯನಿಗಿಂತ ಅಧಿಕವಾದ ತೇಜಸ್ಸಿನಿಂದ ಪ್ರಕಾಶಿಸುತ್ತಿದ್ದ ಹಯಗ್ರೀವ (ಸಾಲಿಗ್ರಾಮ) ಶಿಲೆಯನ್ನು ನೋಡಿ ಭಕ್ತಿಯಿಂದ ತಂದು ನಿತ್ಯದಲ್ಲೂ ಪೂಜಿಸಿ ಹರಿಸೇವನೆಯಿಂದ ಸಂತೋಷಪಟ್ಟರು.

**ಶ್ಲೋಕ:–** **ಧನೀ ಕಶ್ಚಿತ್ಸಲೋಭೀತಿ ತಲ್ಲೋಭವಿನಿವೃತ್ತಯೇ ।**
**ಹಯಾಸ್ಯಸ್ಯ ಶಿಲಾಮನ್ಯಾಂ ತತ್ಸಮೀಪೇ ನ್ಯಧಾದ್ಗುರುಃ ॥31॥**

**ಅರ್ಥ:–** ಲೋಭಿಯಾದ ಧನಿಕನೋರ್ವನ ಲೋಭಿತನವನ್ನು ನಿವಾರಿಸುವ ಸಲುವಾಗಿ ಗುರುಗಳು ಆ ಧನಿಕನಿಗೆ ಬೇರೊಂದು ಹಯಗ್ರೀವ ಸಾಲಿಗ್ರಾಮವನ್ನು ಪೂಜಿಸಲು ಕೊಟ್ಟರು.

**ಶ್ಲೋಕ:–** **ತದಾರಭ್ಯ ಧನೀ ಲೋಭಾನ್ಮುಕ್ತೋ ಧರ್ಮಪರೋಽಭವತ್ ।**
**ಕಾಲಾಂತರೇ ಸಮಾಗತ್ಯ ವಾದಿರಾಜಃ ಪ್ರಸನ್ನಧೀಃ ॥32॥**
**ವೈಕುಂಠದಾಸಂ ಧನಿನಂ ಹರಿಭಕ್ತಂ ಚಕಾರ ಹಿ ।**

**ಅರ್ಥ:–** ಅಲ್ಲಿಂದಾಚೆಗೆ ಧನಿಕನು ಲೋಭತನದಿಂದ ಮುಕ್ತನಾಗಿ ಧರ್ಮಿಷ್ಠನಾದನು. ಕಾಲಾಂತರದಲ್ಲಿ ಪ್ರಸನ್ನ ಚಿತ್ತರಾದ ವಾದಿರಾಜರು ಅಲ್ಲಿಗೆ ಬಂದು ಆ ಹರಿಭಕ್ತನಾದ ಧನಿಕನನ್ನು ವೈಕುಂಠದಾಸ(ರೆಂಬ) ಹೆಸರಿನಿಂದ ಪ್ರಸಿದ್ಧರಾಗಿ ದಾಸಕೂಟದಲ್ಲಿರುವವರನ್ನಾಗಿ ಮಾಡಿದರು.

**ಶ್ಲೋಕ:–** **ಏವಂ ಚರನ್ ಘೂರ್ಜರಾಣಾಂ ದೇಶೇ ತದ್ದೇಶಗಾನ್‌ಬಹೂನ್ ॥33॥**
**ಸ್ವಶಿಷ್ಯಾನಾತತಾನಾಥ ಹರಿಭಕ್ತಾಗ್ರಣೀರ್ಯತಿಃ ।**

**ಅರ್ಥ:–** ಹರಿಭಕ್ತಾಗ್ರೇಸರರಾದ ವಾದಿರಾಜ ಯತಿಗಳು ಈ ರೀತಿ (ಮಹಿಮೆಗಳಿಂದ ಯುಕ್ತರಾಗಿ) ಸಂಚರಿಸುತ್ತಾ ಗುಜರಾಥ್ ದೇಶದಲ್ಲಿ, ಆ ದೇಶದ ಬಹುಮಂದಿಯನ್ನು ತನ್ನ ಶಿಷ್ಯರನ್ನಾಗಿ ಮಾಡಿದರು.(ಇವರಿಂದ ಶಿಷ್ಯ ವರ್ಗವು ವಿಸ್ತಾರವಾಯಿತು.)

**ಶ್ಲೋಕ:–** **ತತಃ ಪರಮಹಂಸೋಽಯಂ ಪಂಪಾಕ್ಷೇತ್ರಂ ಸಮಾಸದತ್ ॥34॥**

**ಅರ್ಥ:–** ಆ ಬಳಿಕ ಯತಿಶ್ರೇಷ್ಠರಾದ ಈ ವಾದಿರಾಜರು ಪಂಪಾಕ್ಷೇತ್ರಕ್ಕೆ ಬಂದರು.

**ಶ್ಲೋಕ:–** **ತತ್ರ ಕೃಷ್ಣಾಚ್ಯುತೌ ಭೂಪೌ ಬಹುದಾರಿದ್ರ್ಯ ಪೀಡಿತೌ ।**
**ಶರಣಂ ಪ್ರಾಪತುರ್ಭೂಮೌ ಕಲ್ಪವೃಕ್ಷಾಯಿತಂ ಯತಿಮ್ ॥35॥**

**ಅರ್ಥ:–** ಅಲ್ಲಿ ಆರ್ಥಿಕ ದುರವಸ್ಥೆಯಿಂದ ಪೀಡಿತರಾಗಿದ್ದ (ವಿಜಯನಗರದ ಅರಸರಾಗಿದ್ದ) ಕೃಷ್ಣದೇವರಾಯ ಮತ್ತು ಅಚ್ಯುತರಾಯರೆಂಬ ರಾಜರಿಬ್ಬರು, ಭೂಲೋಕದಲ್ಲಿ ಕಲ್ಪವೃಕ್ಷದಂತಿರುವ ವಾದಿರಾಜಯತಿಗಳ ಬಳಿಗೆ ಶರಣಾಗತರಾಗಿ ಬಂದರು.

**ಶ್ಲೋಕ:–** **ತಯೋರಭಯದಾಯೀ ಸ ವಾಲಿಗಹ್ವರಮಾವಿಶತ್ ।**
**ತತ್ರೋಪಲಂ ಪ್ರೋಕ್ಷ್ಯಮಾಣಂ ವಿದಾರಿತಮಭೂತ್ಕಿಲ ॥36॥**

**ಅರ್ಥ:–** ಅವರಿಬ್ಬರಿಗೆ ಅಭಯವನ್ನಿತ್ತು. ವಾದಿರಾಜರು ವಾಲಿಗುಹೆಯನ್ನು ಪ್ರವೇಶಿಸಿದರು. ಅಲ್ಲಿದ್ದ ಬಂಡೆಯನ್ನು ಪ್ರೋಕ್ಷಿಸಲು ಅದು ಸೀಳಿತು.

**ಶ್ಲೋಕ:–** **ಪೇಟಿಕಾಭಶಿಲಾ ಮಧ್ಯೇ ಮುಕ್ತರತ್ನಾನಿ ಭೂರಿಶಃ ।**
**ದೃಷ್ಟಾನಿ ವಾದಿರಾಡಾಜ್ಞಾ ಬಲಮಾಲಂಬ್ಯ ಭೂಪತೀ ॥37॥**
**ತಾನ್ಯಾದಾಯ ಪ್ರಾರ್ಥಯತಾಂ ಕಾಮಿತಂ ಗೃಹ್ಯತಾಮಿತಿ ।**
**ವಿರಕ್ತೋ ಯತಿರಾಟ್ ತತ್ರ ಪ್ರತಿಮಾಯುಗ್ಮಮಾತ್ರಕಮ್ ॥38॥**
**ಸುಗ್ರೀವಪೂಜಿತಂ ರಾಮಂ ವಿಠ್ಠಲಂ ವಾಲಿಪೂಜಿತಮ್ ।**
**ಗೃಹೀತವಾನ್ ಸ್ವಪೂಜಾರ್ಥಮನ್ಯನ್ ಮಾಽಸ್ತು ಮಮೇತಿ ಸಃ ॥39॥**

**ಅರ್ಥ:–** ಪೆಟ್ಟಿಗೆಯಂತೆ ಪ್ರಕಾಶಿತವಾದ ಶಿಲಾಮಧ್ಯದಲ್ಲಿ ಬಹು ಮುತ್ತುರತ್ನಗಳು ಕಂಡು ಬಂದವು ವಾದಿರಾಜರ ಆಜ್ಞಾಬಲವನ್ನು ಅವಲಂಬಿಸಿ ಆ ರಾಜರಿಬ್ಬರು ಅವುಗಳನ್ನು ತೆಗೆದುಕೊಂಡು "ಬೇಕಾದಷ್ಟನ್ನು ತಾವು ಸ್ವೀಕರಿಸಿ" ಎಂದು

ಹೇಳಲು ವಿರಕ್ತರಾದ ಯತಿರಾಜರು, ಸುಗ್ರೀವನಿಂದ ಪೂಜಿತವಾದ ರಾಮದೇವರು ಮತ್ತು ವಾಲಿಪೂಜಿತವಾದ ವಿಠಲದೇವರು. ಈ ಎರಡು ವಿಗ್ರಹಗಳನ್ನು ಮಾತ್ರ ತನ್ನ ಪೂಜೆಗೊಸ್ಕರ ಸ್ವೀಕರಿಸಿದರು. ಉಳಿದ ಯಾವುದೂ ತನಗೆ ಬೇಡವೆಂದು ಅವರು ಹೇಳಿದರು.

**ಶ್ಲೋಕ:– ಯಥಾऽऽವಯೋರ್ಹರೇಸ್ಸೇವಾಸುಕೃತಂ ಲಪ್ಸ್ಯತೇऽಂಜಸಾ ।**
**ಅನುಗ್ರಾಹ್ಯೌ ತದೇತ್ಯುಕ್ತಃ ಸ್ವಪರ್ಯಾಯೇ ಘಟಿಷ್ಯತೀ ॥40॥**

**ಅರ್ಥ:–** ನಮ್ಮಿಬ್ಬರಿಗೆ ಶೀಘ್ರವಾಗಿ ಹರಿಸೇವಾ ಸುಕೃತವು ಲಭಿಸುವಂತೆ ಅನುಗ್ರಹಿಸಬೇಕೆಂದು (ರಾಜರಿಬ್ಬರಿಂದ) ಪ್ರಾರ್ಥಿತರಾದ ವಾದಿರಾಜರು ಅದು ತಮ್ಮ (ಕೃಷ್ಣ ಪೂಜಾ) ಪರ್ಯಾಯಕಾಲದಲ್ಲಿ ಆಗುವುದೆಂದು ನುಡಿದರು.

**ಶ್ಲೋಕ:– ಇತ್ಯಾಜ್ಞಪ್ತೌ ತದಾಹೂತೌ ರೂಪ್ಯಪೀಠಸ್ಥ ಸನ್ಮಠಮ್ ।**
**ಶ್ರೀಕೃಷ್ಣಸ್ಯಾತಿಜೀರ್ಣಂ ತಂ ನವೀನಂ ತೇನತುರ್ಮಠಮ್ ॥41॥**

**ಅರ್ಥ:–** ಈ ರೀತಿಯಾಗಿ ಆಜ್ಞಪ್ತರಾದ ಆ ರಾಜರಿಬ್ಬರು, ಆಗ (ಉಡುಪಿಗೆ ಪರ್ಯಾಯ ಕಾಲದಲ್ಲಿ) ಬರಲು ಆಹ್ವಾನಿಸಲ್ಪಟ್ಟರು. ಉಡುಪಿಯಲ್ಲಿರುವ ಶಿಥಿಲವಾದ ಶ್ರೀಕೃಷ್ಣ ಮಠವು ಅವರಿಂದ ನವೀಕರಣ ಮಾಡಲ್ಪಟ್ಟಿತು.

**ಶ್ಲೋಕ:– ತತಃ ಕಾಲೇऽಚ್ಯುತೋ ರಾಜಾ ವೈದ್ಯಾಸಾಧ್ಯರುಜಾऽರ್ದಿತಃ ।**
**ಇತಿ ಶ್ರುತ್ವಾ ವಾದಿರಾಜಃ ಕೃಪಯಾ ತತ್ಪುರಂ ಗತಃ ॥42॥**

**ಅರ್ಥ:–** ಕಾಲಾಂತರದಲ್ಲಿ ವಿಜಯನಗರದ ಅಚ್ಯುತರಾಯನು ವೈದ್ಯರಿಂದ ಗುಣಪಡಿಸಲಾಗದ ಕಾಯಿಲೆಯಿಂದ ನರಳುತ್ತಿರುವುದನ್ನು ಕೇಳಿ, ವಾದಿರಾಜರು ಕೃಪೆಯಿಂದ ಆತನ ನಗರಕ್ಕೆ ಹೋದರು.

**ಶ್ಲೋಕ:– ಮಂತ್ರಪೂತಜಲೇನೈವ ಜಹಾರಾಸ್ಯ ರುಜಂ ಗುರುಃ ।**
**ತುಷ್ಟೋ ರಾಜಾ ತಮಾರೋಪ್ಯ ಸ್ವಸಿಂಹಾಸನಮಾದರಾತ್ ॥43॥**

**ಅರ್ಥ:–** ಗುರುವಾದಿರಾಜರು ಕೇವಲ ಮಂತ್ರಿತಜಲದಿಂದಲೇ ಅರಸನ ಕಾಯಿಲೆಯನ್ನು ಗುಣಪಡಿಸಿದರು. ಆನಂದಿತನಾದ ರಾಜನು ಗುರುಗಳನ್ನು ತನ್ನ ಸಿಂಹಾಸನದಲ್ಲಿ ಆದರದಿಂದ ಕೂಡಿಸಿದನು.

**ಶ್ಲೋಕ:– ಛತ್ರಾಸನಾದಿಬಿರುದಾನ್ಯಾರ್ಪಯದ್ಗುರುಪಾದಯೋಃ ।**
**ತಾನ್ಯದ್ಯಾಪಿ ಸುಪೂಜ್ಯಂತೇ ಗುರುಪುಣ್ಯಾಹನಿ ಸ್ಫುಟಮ್ ॥44॥**

**ಅರ್ಥ:–**ಅಚ್ಯುತರಾಯನು ಗುರುಗಳ ಪಾದಗಳಿಗೆ ಛತ್ರ ಆಸನಾದಿ ಬಿರುದುಗಳನ್ನು ಅರ್ಪಿಸಿದನು. ಈಗಲೂ ಅವುಗಳು ವಾದಿರಾಜರ ಪುಣ್ಯದಿನದಲ್ಲಿ ಪೂಜೆಗೊಳ್ಳುತ್ತಿವೆ.

**ಶ್ಲೋಕ:– ಕದಾಚಿತ್ತೌಲವೇ ದೇಶೇ ಸಂಚರನ್ನಂಚಿತಕ್ರಿಯಃ ।**
**ಪೂರ್ವವೇಣುಗ್ರಾಮಸಂಸ್ಥೇ ಜೈನಾಲಯಸಮೀಪಗಃ ॥45॥**

**ಅರ್ಥ:–** ಸಂತೋಷಗೊಳಿಸುವ ಪ್ರೀತಿಯುಳ್ಳ ವಾದಿರಾಜರು ಒಮ್ಮೆ ತೌಳವ ದೇಶದಲ್ಲಿ ಸಂಚರಿಸುತ್ತಿರುವಾಗ ಮೂಡುಬಿದರೆಗ್ರಾಮದಲ್ಲಿರುವ ಜೈನದೇವಾಲಯದ ಬಳಿಗೆ ಬಂದರು.

**ಶ್ಲೋಕ:– ಬಂಗವಂಶ್ಯೋ ಜೈನರಾಜಃ ಸ್ವದೇವಾಗಾರಮೀಕ್ಷ್ಯತಾಮ್ ।**
**ಇತಿ ನಿರ್ಬಂಧಯಾಮಾಸ ಗುರುಂ ಪ್ರಖ್ಯಾತಕೀರ್ತಿಕಮ್ ॥46॥**

**ಅರ್ಥ:–** (ಆ ಸಮಯದಲ್ಲಿ ಮೂಡಬಿದರೆಯನ್ನು ಆಳುತ್ತಿದ್ದ) ಬಂಗವಂಶಜ ಜೈನರಾಜನು ತಮ್ಮ ಜೈನದೇವಾಲಯವನ್ನು ಸಂದರ್ಶಿಸಲೇಬೇಕು ಎಂಬುದಾಗಿ ಪ್ರಸಿದ್ಧ ಕೀರ್ತಿಯುಳ್ಳ ಗುರುಗಳನ್ನು ನಿರ್ಬಂಧ ಪಡಿಸಿದನು.

**ಶ್ಲೋಕ:– ಯತಿರಾಡಾಹ ಮದ್ದೃಷ್ಟ್ಯಾ ಭವದ್ದೇವೋನ್ಯಥಾಕೃತಿಃ ।**
**ಸ್ಯಾಚ್ಚೇದ್ದೇಯೋ ಭವೇತ್ ತರ್ಹಿ ಪ್ರವಿಶಾಮೀತಿ ಭೂಪತಿಮ್ ॥47॥**

**ಅರ್ಥ:–** ಯತಿರಾಜರು "ನಮ್ಮ ನೋಟದಿಂದಲೇ ನಿಮ್ಮ ದೇವರು ಬೇರೆ ರೂಪ ಹೊಂದಬಹುದು ಹಾಗೇನಾದರೂ ಆದರೆ ಆ ಪ್ರತೀಕವನ್ನು ನಮಗೆ ಕೊಡಲು ನೀವು ಒಪ್ಪುವದಾದರೆ ನಿಮ್ಮ ಜೈನಾಲಯವನ್ನು ಪ್ರವೇಶಿಸುತ್ತೇವೆ" ಎಂದು ಜೈನರಾಜನಿಗೆ ಹೇಳಿದರು.

**ಶ್ಲೋಕ:– ಭೂಪಾನುಮೋದಿತೋ ದೇವಸದನಂ ಪ್ರಾವಿಶದ್ ಯತಿಃ ।**
**ಹರಿದ್ರತ್ನಮಯೀಂ ಬುದ್ಧಪ್ರತಿಮಾಂ ವೀಕ್ಷ್ಯ ಕೌತುಕಾತ್ ॥48॥**

**ತಸ್ಯಾಂ ರತ್ನಮಯಾರ್ಚಾಯಾಂ ಧ್ಯಾತವಾನ್ ವಿಠಲಾತ್ಮಕಮ್ ।**
**ತದ್ಧ್ಯಾನಾದ್ಬುದ್ಧಮೂರ್ತಿಸ್ಸಾ ವಿಠಲಾಕಾರಭಾಗಭೂತ್ ॥49॥**

**ಅರ್ಥ:–** ಜೈನರಾಜನು (ವಾದಿರಾಜರ ಕರಾರಿಗೆ) ಸಮ್ಮತಿಸಲು, ಯತಿಗಳು ಜೈನಾಲಯವನ್ನು ಪ್ರವೇಶಿಸಿ, ಪಚ್ಚೆರತ್ನಮಯವಾದ ಬುದ್ಧ ಪ್ರತಿಮೆಯನ್ನು ಕುತೂಹಲದಿಂದ ವೀಕ್ಷಿಸಿ, ರತ್ನಮಯವಾದ ಆ ಪ್ರತಿಮೆಯಲ್ಲಿ ವಿಠ್ಠಲನನ್ನು ಧ್ಯಾನಿಸಿದರು ಅವರ ಧ್ಯಾನದ ದೆಸೆಯಿಂದ ಆ ಬುದ್ಧನ ಪ್ರತಿಮೆಯು ವಿಠ್ಠಲನ ರೂಪ ಹೊಂದಿತು.

**ಶ್ಲೋಕ:–** **ಭೀತೋಽನೃತಾನ್ನೃ ಪಾಲೋಽಸೌ ತಾಮರ್ಚಾಂ ಗುರುವೇ ದದೌ ।**
**ಅಧುನಾಪಿ ವಿಭಾತ್ಯದ್ಧಾ ವಿಠ್ಠಲಾರ್ಚಾ ಹರಿನ್ಮಣೇಃ ॥50॥**

**ಅರ್ಥ:–** ಸುಳ್ಳಿಗೆ ಹೆದರಿದ (ಆಡಿದ ಮಾತಿನಂತೆ ನಡೆಯದಿರಲು ಹೆದರಿದ) ಆ ಜೈನರಾಜನು ವಾದಿರಾಜಗುರುಗಳಿಗೆ ಆ (ವಿಠ್ಠಲನ) ಪ್ರತಿಮೆಯನ್ನು ಕೊಟ್ಟನು. ಈಗಲೂ ಪಚ್ಚೆವಿಠ್ಠಲ ವಿಗ್ರಹವು (ಸೋದೆ ಮಠದಲ್ಲಿ) ಶೋಭಿಸುತ್ತಿದೆ.

**ಶ್ಲೋಕ:–** **ಧರ್ಮಸ್ಥಲಾಭಿಧಗ್ರಾಮ ಸಮೀಪೇ ಸಂಚರನ್ ಯತಿಃ ।**
**ತತ್ಸ್ಥಲೇಶ ಪ್ರಾರ್ಥಿತಃಸನ್ ಭೂತಸ್ಥಲಮಿದಂ ಪರಮ್ । ॥51॥**
**ನಾಸ್ಮದಾವಾಸಯೋಗ್ಯಂ ಸ್ಯಾದಿತ್ಯುಕ್ತೇನ ಪ್ರಯಾಚಿತಃ ।**
**ಮಂಗಲಾಪುರ ಸಪ್ತರ್ಷಿ ಕುಂಡತೀರಗಶಂಕರಮ್ ॥52॥**
**ಅಂಶತೋ ಲಿಂಗರೂಪಂ ತಮಾನಾಯ್ಯಾಸ್ಥಾಪಯನ್ಮುದಾ ।**
**ತತ್ರಾರಾಧ್ಯಾರಾಧನೇನ ತತ್ಸ್ಥಲೇಶಂ ಪ್ರಹರ್ಷಯನ್ ॥53॥**
**ಲಿಂಗೋಪರಿ ನೃಸಿಂಹಸ್ಯ ಶಿಲಾಂ ಕ್ಷೇತ್ರಪ್ರಸಿದ್ಧಯೇ ।**
**ನ್ಯವೇಶಯತ್ತಥಾ ಭೂತರಾಜಮಾಸ್ಥಾಪತ್ ಸುಧೀಃ ॥54॥**

**ಅರ್ಥ:–** ಧರ್ಮಸ್ಥಳವೆಂಬ ಹೆಸರಿನ ಗ್ರಾಮದ ಸಮೀಪದಲ್ಲಿ ಯತಿಗಳು ಸಂಚಾರ ಮಾಡುತ್ತಿರುವಾಗ (ತಾವು ಇಲ್ಲಿ ವಾಸಿಸಬೇಕೇಂದು) ಆ ಸ್ಥಳದ ಯಜಮಾನನಿಂದ ಪ್ರಾರ್ಥಿಸಲ್ಪಡಲು. "ಇದು ಅಧಿಕವಾಗಿ ಭೂತಸ್ಥಳವು, ನಮ್ಮ ಆವಾಸಕ್ಕೆ ಯೋಗ್ಯವಾದುದಲ್ಲ" ಎಂದು ಹೇಳಿದಾಗ್ಯೂ (ಆಸ್ಥಳೇಶನಿಂದ) ಬಹಳವಾಗಿ ಪ್ರಾರ್ಥಿಸಲ್ಪಟ್ಟು ಮಂಗಳೂರಿನ ಸಪ್ತರ್ಷಿಕುಂಡ ತೀರದ (ಈಶ್ವರನ ಅಂಶ) (ಸಾನ್ನಿಧ್ಯವುಳ್ಳ) ಲಿಂಗರೂಪದ ಮಂಜುನಾಥನನ್ನು(ಭೂತರಾಜರ ಮೂಲಕ) ತರಿಸಿ, ಸಂತೋಷದಿಂದ ಅಲ್ಲಿ ಸ್ಥಾಪಿಸಿದರು. ಅಲ್ಲಿ ಆರಾಧ್ಯದೇವತೆ ಆ ಕ್ಷೇತ್ರವು ಪ್ರಸಿದ್ಧಿಗೆ ಬರಲು, ಲಿಂಗದ ಮೇಲೆ ನರಸಿಂಹ ಸಾಲಿಗ್ರಾಮವನ್ನು ಇಟ್ಟರು. ಹಾಗೆಯೇ ಜ್ಞಾನಿಗಳಾದ ವಾದಿರಾಜರು ಭೂತರಾಜರನ್ನು ಸ್ಥಾಪಿಸಿದರು.

**ಶ್ಲೋಕ:–** **ನಿತ್ಯಮನ್ನಪ್ರದಾನೇನ ಖ್ಯಾತಿರಸ್ತು ಸ್ಥಲಸ್ಯ ಹಿ ।**
**ಇತ್ಯಾಜ್ಞಾಪ್ಯಾಚರದ್ದೇಶೇ ಭಕ್ತಕಲ್ಪದ್ರುಮೋ ಗುರುಃ ॥55॥**

**ಅರ್ಥ:–** ಈ ಧರ್ಮಸ್ಥಳವು ನಿತ್ಯವೂ ಅನ್ನದಾನ ಮಾಡುವ ಮೂಲಕ ಪ್ರಸಿದ್ಧಿ ಹೊಂದಲಿ; ಎಂಬುದಾಗಿ (ಅಲ್ಲಿ ನಿತ್ಯವೂ ಅನ್ನದಾನ ನಡೆಸುವಂತೆ) ಆಜ್ಞಾಪಿಸಿ ಭಕ್ತಕಲ್ಪದ್ರುಮರಾದ ವಾದಿರಾಜರು ಬೇರೆ ದೇಶದೆಡೆಗೆ ಪ್ರಯಾಣಿಸಿದರು.

**ಶ್ಲೋಕ:–** **ಕುಮಾರಧಾರಾನದ್ಯಾಶ್ಚ ನೇತ್ರಾವತ್ಯಾಶ್ಚ ಸಂಗಮಃ ।**
**ಯತ್ರ ತನ್ನಿಕಟೇ ಚಾಸ್ತಿ ನಾವೂರು ಗ್ರಾಮ ಏಕಃ ॥56॥**

**ಅರ್ಥ:–** ಕುಮಾರಧಾರಾ ಹಾಗೂ ನೇತ್ರಾವತಿ ನದಿಗಳ ಸಂಗಮ ಸ್ಥಳದ ಹತ್ತಿರದಲ್ಲಿ 'ನಾವೂರು' ಎಂಬ ಗ್ರಾಮವಿದೆ.

**ಶ್ಲೋಕ:–** **ತತ್ರಾಗ್ರಹಾರೇ ಪ್ರಥಿತಃ ಕಟಿಪೂರ್ವಶಿವಾಲಯಃ ।**
**ಶಿವಲಿಂಗ ಸಹಸ್ರಂ ತು ಪ್ರೋದ್ಭೂತಂ ತತ್ರದೃಶ್ಯತೇ ॥57॥**

ಅರ್ಥ:– ಆ ನಾವೂರು ಗ್ರಾಮದ ಅಗ್ರಹಾರದಲ್ಲಿ ಕಟಿಪೂರ್ವಶಿವ ದೇವಾಲಯವು ಪ್ರಸಿದ್ಧವಾದುದು. ಅಲ್ಲಿ ಸಾವಿರ ಲಿಂಗಗಳು ಉದ್ಭವವಾಗಿರುವುದನ್ನು ನೋಡಬಹುದು.

**ಶ್ಲೋಕ:–** **ತದಾಲೋಕ್ಯ ಗುರುಃ ಪ್ರಾಹ ತದ್ದೇಶಾಧಿಪತಿಂ ಪ್ರತಿ ।**
**ಶಿವಲಿಂಗಾಭಿಷೇಕೋಽತ್ರ ಕಾರ್ಯತಾಮಿತಿ ಸೋಽಬ್ರವೀತ್ ॥58॥**
**ತತ್ರ ತತ್ರೋದಿತಾನಾಂ ಹಿ ಲಿಂಗಾನಾಮುಚ್ಚ ಭೂಸ್ಥಿತೇಃ ।**
**ಅಭಿಷೇಕೋ ನರೈಃ ಕಥಂ ಕರ್ತುಮಿತಿ ಪ್ರಭುಃ ॥59॥**

**ಅರ್ಥ:–** ಅದನ್ನು ನೋಡಿದ ಗುರುಗಳು ಆ ದೇಶದರಾಜನನ್ನು ಕುರಿತು "ಇಲ್ಲಿ ಶಿವಲಿಂಗಗಳಿಗೆ ಅಭಿಷೇಕ ಮಾಡಬೇಕು" ಎಂದರು. ಆಗ ರಾಜನು. "ಪ್ರಭುಗಳೇ! ಅಲ್ಲಲ್ಲಿ ಉದ್ಭವವಾಗಿರುವ ಲಿಂಗಗಳು ಎತ್ತರವಾದ ಸ್ಥಳದಲ್ಲಿವೆ. ಅವುಗಳ ಅಭಿಷೇಕವು ಮನುಷ್ಯರಿಂದ ಹೇಗೆ ಸಾಧ್ಯ?" ಎಂದು ಹೇಳಿದನು.

**ಶ್ಲೋಕ:–** **ಗುರುಃ ಸ್ವದಂಡಕೋಟ್ಯಗ್ರಾದ್ರೇಖಾಂ ಕೃತ್ವಾ ಜಲೋದ್ಗಮಮ್ ।**
**ದರ್ಶಯಾಮಾಸ ಸಹಸಾ ಪ್ರವಾಹಾಲ್ಲಿಂಗ ಸೇಚನಮ್ ॥60॥**
**ಕಾರಯಾಮಾಸ ನೃಪತಿರ್ವಿಸ್ಮಿತೋ ಗ್ರಾಮಮಜ್ಜನಾತ್ ।**
**ಭೀತಃ ಶರಣಮಾಪೇದೆ ನಿಷ್ಪ್ರವಾಹಾಯ ಸದ್ಗುರುಮ್ ॥61॥**

**ಅರ್ಥ:–** ಗುರುಗಳು ತಮ್ಮ ದಂಡದ ತುದಿಯಿಂದ ರೇಖೆಯನ್ನು ಮಾಡಿ (ನದಿಯಿಂದ ಪ್ರಾರಂಭಿಸಿ) ಅದರಿಂದ ಜಲವು ಮೇಲಕ್ಕೆ ಹರಿಯುವುದನ್ನು ತೋರಿಸಿದರು. ಹಠಾತ್ತಾಗಿ ಪ್ರವಾಹೋಪಾದಿಯಲ್ಲಿ ಹರಿದು ಲಿಂಗಗಳಿಗೆ ಅಭಿಷೇಕವಾಗುವಂತೆ ಮಾಡಿದರು. (ಅದನ್ನು ನೋಡಿ) ವಿಸ್ಮಿತನಾದ ರಾಜನು (ಪ್ರವಾಹದಿಂದ) ಗ್ರಾಮ ಮುಳುಗಡೆಯಾಗಬಹುದೆಂದು ಹೆದರಿ ಪ್ರವಾಹವು ನಿಲ್ಲಲು ಸದ್ಗುರುಗಳಿಗೆ ಶರಣು ಬಂದನು.

**ಶ್ಲೋಕ:–** **ಗುರುಣಾ ತೀರ್ಥಮೇಕಂ ತು ಕೃತ್ವಾಽದರ್ಶನಮಾಪಿತಃ ।**
**ಪ್ರವಾಹಸ್ತದ್ದಂಡತೀರ್ಥಂ ಭಾತ್ಯದ್ಯಾಪಿ ಯಶೋಧ್ವಜಮ್ ॥62॥**

**ಅರ್ಥ:–** ಪ್ರವಾಹವು ಅದರ್ಶನವನ್ನು ಹೊಂದಿತು. (ಅಂದರೆ ನಿಂತು ಹೋಯಿತು) ಗುರುಗಳು ಒಂದು ತೀರ್ಥವನ್ನು ನಿರ್ಮಾಣ ಮಾಡಿದರು. (ಗುರುಗಳ) ಜಯ ಪತಾಕೆಯಂತಿರುವ (ಆ) ದಂಡತೀರ್ಥವು ಇಂದಿಗೂ ಕೂಡ ಶೋಭಿಸುತ್ತಿದೆ.

**ಶ್ಲೋಕ:–** **ರಾಜಾ ತ್ವಾಶ್ಚರ್ಯಮಾಪನ್ನಸ್ತತ್ಸ್ಥಲಂ ಗುರವೇ ದದೌ ।**
**ಪುಡಿಬೈಲ್ವಿತಿ ವಿಖ್ಯಾತಂ ತನ್ಮಠೇಶವಶಂ ಖಲು ॥63॥**

**ಅರ್ಥ:–** ಆಶ್ಚರ್ಯದಿಂದ ಯುಕ್ತನಾದ ರಾಜನು ಆ (ದಂಡತೀರ್ಥವಿರುವ) ಸ್ಥಳವನ್ನು ಗುರುಗಳಿಗೆ (ದಾನ) ಒಪ್ಪಿಸಿದನು. ಪುಡಿ (ಪುಂಡಿ) ಬೈಲೆಂದು ವಿಖ್ಯಾತವಾದ ಆ ಸ್ಥಳವು (ಈಗಲೂ) ಸೋದೆ ಮಠದ ವಶದಲ್ಲಿದೆ.

**ಶ್ಲೋಕ:–** **ಸಾಹಿತ್ಯಾಕಾಶರಾಕೇಶೋ ಮೀಮಾಂಸಾಟವಿ ಕೇಸರೀ ।**
**ಶೃತಿಕಾಸಾರ ಮೀನಃ ಸ ವಾದಿತೂಲತನೂನಪಾತ್ ॥64॥**

**ಅರ್ಥ:–** ಸಾಹಿತ್ಯವೆಂಬ ಆಕಾಶದಲ್ಲಿರುವ, ಪೂರ್ಣಚಂದ್ರನಂತೆ, ಮೀಮಾಂಸಾ ಎಂಬ ಅಡವಿಯಲ್ಲಿ (ನಿರಾತಂಕವಾಗಿ ಸಂಚರಿಸುತ್ತಿರುವ) ವನರಾಜ ಸಿಂಹದಂತೆ, ಶೃತಿಗಳೆಂಬ ಕೊಳದಲ್ಲಿರುವ ಮೀನಿನಂತೆ, ಪರವಾದಿಗಳೆಂಬ ಹತ್ತಿಗೆ ಅಗ್ನಿಯಂತೆ ಇರುವವರು ಈ ವಾದಿರಾಜರು.

**ಶ್ಲೋಕ:–** **ವೇದಾಂತಾಬ್ಧಿ ಮಹಾನಕ್ರಃ ತರ್ಕವಜ್ರಾಯುಧಃ ಕೃತೀ ।**
**ಶಬ್ದಚಾಪಧರೋ ಧೀರೋ ವಾದಿರಾಜೋ ವ್ಯರಾಜತ ॥65॥**

**ಅರ್ಥ:–** ವೇದಾಂತ ಸಾಗರದಲ್ಲಿ ಮಹಾಮೊಸಳೆಯಂತಿರುವ ತರ್ಕದಲ್ಲಿ ವಜ್ರಾಯುಧ ದಂತಿರುವ ಶಬ್ದಗಳೆಂಬ ಧನುಸ್ಸನ್ನು ಧರಿಸಿರುವ ಧೀರರಾದ, ಜ್ಞಾನಿಗಳಾದ ವಾದಿರಾಜರು ಶೋಭಿಸಿದರು.

**ಶ್ಲೋಕ:–** **ಶತಾಧಿಕಗ್ರಂಥಗಣೈಃ ಕೀರ್ತಿಸ್ತಂಭಂ ನ್ಯಚೀಖನತ್ ।**
**ಶ್ರೀಯುಕ್ತಿಮಲ್ಲಿಕಾಮುಖ್ಯಾಃ ಭಾಂತಿ ಯತ್ರ ಧ್ವಜಾಯಿತಾಃ ॥66॥**

**ಅರ್ಥ:–** ವಾದಿರಾಜರು ತಾವು ರಚಿಸಿದ ನೂರುಗಿಂತಲೂ ಅಧಿಕವಾದ ಗ್ರಂಥ ಸಮೂಹಗಳಿಂದ ಕೀರ್ತಿ ಎಂಬ ಸ್ತಂಭವನ್ನು ನೆಟ್ಟರು. ಶ್ರೀಯುಕ್ತಿ ಮಲ್ಲಿಕಾದಿ ಪ್ರಮುಖ ಗ್ರಂಥಗಳು ಆ ಕೀರ್ತಿಸ್ತಂಭದಲ್ಲಿ ಧ್ವಜದಂತೆ ಕಂಗೊಳಿಸುತ್ತಿವೆ.

**ಶ್ಲೋಕ:–** **ಇತಿ ನರಾತಿಗಕಾರ್ಯ ಕಲಾಪತಃ ಪ್ರಥಿತ ಕೀರ್ತಿಚಯೋ**
**ಗುರುರಾಣ್ಮುದಾ ಭಜಕಮರ್ತ್ಯಚಯಂ ಹಿ ಸಮುದ್ಧರನ್ನನು ಚಚಾರ ಹಯಾ–ಸ್ಯಪದಾರ್ಚಕಃ ॥67॥**

**ಅರ್ಥ:–** ಈ ರೀತಿಯಾಗಿ ಅತಿ ಮಾನುಷ ಕಾರ್ಯಗಳಿಂದಲೂ ಪ್ರಖ್ಯಾತವಾದ ಕೀರ್ತಿ ಸಮೂಹಗಳಿಂದಲೂ ಹಯವದನ ಪಾದ ಆರಾಧಕರಾದ ಗುರುರಾಜರು ತನ್ನನ್ನು ಸೇವಿಸುವ ಜನರ ಸಮೂಹವನ್ನು ಉದ್ಧರಿಸುತ್ತಾ ಸಂತೋಷ ದಿಂದ ಸಂಚರಿಸಿದರು.

**ಶ್ಲೋಕ:–** **ಇತಿ ಶ್ರೀವೇದ ನಿಧಿತೀರ್ಥಾಂತೇವಾಸಿ ರಾಮಚಂದ್ರಾಚಾರ್ಯ ವಿರಚಿತೇ ಶ್ರೀ ವಾದಿರಾಜಗುರುವರ ಚರಿತಾಮೃತೇ**
**ತೃತೀಯ ಬಿಂದುಃ ಸಮಾಪ್ತಃ**

**ಅರ್ಥ:–** ಇಲ್ಲಿಗೆ ಶ್ರೀ ವೇದನಿಧಿತೀರ್ಥರ ಶಿಷ್ಯರಾದ ರಾಮಚಂದ್ರಾಚಾರ್ಯರಿಂದ ವಿರಚಿತವಾದ ತೃತೀಯ ಬಿಂದು ಸಮಾಪ್ತವಾಯಿತು.

## ॥ ಚತುರ್ಥಬಿಂದುಃ ॥

**॥ ಶ್ರೀ ವಾದಿರಾಜಗುರುಭ್ಯೋ ನಮಃ ॥**

**ಶ್ಲೋಕ:– ತದಾತ್ವೇ ವ್ಯಾಸರಾಜಾಖ್ಯಃ ಪ್ರಲ್ಹಾದಾಂಶೋ ಯತೀಶ್ವರಃ ।**
**ಶ್ರೀಪದ್ಮನಾಭವಂಶೋತ್ಥ ಮುಕ್ತಾಮಣಿರಭೂದ್ಭುವಿ ॥1॥**

**ಅರ್ಥ:–** ಆ ಕಾಲದಲ್ಲಿ ಪ್ರಹ್ಲಾದ ಅಂಶರಾದ ವ್ಯಾಸರಾಜರೆಂಬ ಹೆಸರಿನ ಶ್ರೇಷ್ಠಯತಿಗಳಿದ್ದರು. ಅವರು ಭೂಮಿಯಲ್ಲಿ ಪದ್ಮನಾಭಯತಿಗಳ ವಂಶದಲ್ಲಿ ಹುಟ್ಟಿದ ಮುತ್ತಿನ ಮಣಿಯಾಗಿದ್ದರು.

**ಶ್ಲೋಕ:– ನ್ಯಾಯಾಮೃತಾದಿಗ್ರಂಥಾನಾಂ ವಾದಿಮೂಕತ್ವದಾಯಿನಾಮ್ ।**
**ಪ್ರೌಢಾನಾಂ ಭುವಿ ನಿರ್ಮಾತಾ ವಿಜಯೀಂದ್ರಾದಿಸದ್ಗುರುಃ ॥2॥**

**ಅರ್ಥ:–** ವಿಜಯೀಂದ್ರರೇ ಮೊದಲಾದವರಿಗೆ ಭೂಮಿಯಲ್ಲಿ ಸದ್ಗುರುಗಳಾದ ಶ್ರೀವ್ಯಾಸ ರಾಜರು ವಾದಿಗಳನ್ನು ಮೂಕರನ್ನಾಗಿ ಮಾಡುವ ಪ್ರೌಢಗ್ರಂಥಗಳ ಕರ್ತೃಗಳು.

**ಶ್ಲೋಕ:– ಸ ಕದಾಚಿದ್‌ರೂಪ್ಯಪೀಠಂ ಸಮಾಯಾತಃ ಸಮಾದರಾತ್ ।**
**ಶ್ರೀಕೃಷ್ಣದರ್ಶನಂ ಕೃತ್ವಾ ಮಧ್ಯತಾಲಮಠಂ ಹ್ಯಗಾತ್ ॥3॥**

**ಅರ್ಥ:–** ಒಂದು ಸಲ ಉಡುಪಿಗೆ ಆಗಮಿಸಿದ ಅವರು ಭಕ್ತಿಯಿಂದ ಶ್ರೀಕೃಷ್ಣನ ದರ್ಶನವನ್ನು ಮಾಡಿ ಮಧ್ಯತಾಲ ಮಠಕ್ಕೆ ಹೋದರು.

**ಶ್ಲೋಕ:– ತತ್ರ ವ್ಯಾಸಂ ಹ್ಯಷ್ಟಯೋಗಿಪೂಜಾರ್ಹಂ ಮಧ್ವಪೂಜಿತಂ ।**
**ಪೂಜಯನ್ನರ್ಚನೋಕ್ತೋಽಸೌ ವ್ಯಾಸಮುಷ್ಟಿಂ ನಿನಾಯ ಹಿ ॥4॥**

**ಅರ್ಥ:–** ಮಧ್ಯತಾಲಮಠದಲ್ಲಿ ಮಧ್ವಾಚಾರ್ಯರಿಂದ ಪೂಜಿತವಾದ (ಉಡುಪಿ) ಅಷ್ಟ ಮಠದ ಸ್ವಾಮಿಗಳಿಂದ ಪೂಜಿಸಲರ್ಹವಾದ ವ್ಯಾಸಮುಷ್ಟಿಯನ್ನು ಪೂಜಿಸಿ ತಾವು ಪೂಜಿಸಬೇಕೆಂಬ ಅಪೇಕ್ಷೆಯಿಂದ ಅದನ್ನು ತೆಗೆದುಕೊಂಡು ಹೋದರು.

**ಶ್ಲೋಕ:– ಬದರ್ಯಾಂ ಮಧ್ವಮುನಯೇ ಸಾಕ್ಷಾದ್ವ್ಯಾಸೇನ ಸೇವಿತುಮ್ ।**
**ವ್ಯಾಸಸ್ಯ ಮುಷ್ಟಯೋಽಷ್ಟೌ ತು ಪುರಾ ದತ್ತಾ ಇತಿ ಶ್ರುತಮ್ ॥5॥**

**ಅರ್ಥ:–** ಹಿಂದೆ ಬದರೀಕ್ಷೇತ್ರದಲ್ಲಿ 'ಮಧ್ವಮುನಿಗಳಿಗೆ ಪೂಜಿಸುವ ಸಲುವಾಗಿ ಸಾಕ್ಷಾತ್ ವೇದವ್ಯಾಸರಿಂದ ಎಂಟು ವ್ಯಾಸ ಮುಷ್ಟಿಗಳು ಕೊಡಲ್ಪಟ್ಟವು' ಎಂದು ಶ್ರುತವಾಗಿದೆ.

**ಶ್ಲೋಕ:– "ಪ್ರಾಪ ಸ ನಾರಾಯಣತಃ ಶುದ್ಧಶಿಲಾತ್ಮಪ್ರತಿಮಾಃ ।**
**ಯಾಸು ಸ ಪದ್ಮಾಸಹಿತೋ ದೋಷ್ಯಹಿತಃ ಸನ್ನಿಹಿತಃ" ॥6॥**
**ಇತಿ ಮಧ್ವಜಯೋಕ್ತ್ಯಾ ತು ವ್ಯಾಸಮುಷ್ಟ್ಯಾಗತಿಃ ಸ್ಫುಟಾ ।**

**ಅರ್ಥ:–** "ಶ್ರೀ ಮಧ್ವಾಚಾರ್ಯರು (ಭಗವದ್ವೇಷಿಗಳಿಗೆ ಶತ್ರುವಾದ) ಶ್ರೀ ನಾರಾಯಣ (ವೇದವ್ಯಾಸ) ದೇವರಿಂದ ಲಕ್ಷ್ಮೀ ಸಮೇತ ಸದಾ ಸನ್ನಿಹಿತವಾಗಿರುವ ಪವಿತ್ರ ಶಿಲಾರೂಪದ ಪ್ರತಿಮೆಗಳನ್ನು (ವ್ಯಾಸ ಮುಷ್ಟಿಗಳನ್ನು)ಪಡೆದುಕೊಂಡರು." ಈ ರೀತಿಯಾಗಿ ವ್ಯಾಸಮುಷ್ಟಿ ಬಂದದ್ದನ್ನು ಸುಮಧ್ವವಿಜಯದಲ್ಲಿ ಸ್ಪಷ್ಟವಾಗಿ ಹೇಳಿದೆ.

**ಶ್ಲೋಕ:– "ಇಷ್ಟ್ವಾ ವ್ಯಾಸಾಶ್ರಮಂ ಗಚ್ಛನ್ ಮುಖ್ಯಪ್ರೇಷ್ಠೋ ಯತೋ ಮರುತ್॥7॥**
**ಪ್ರಣಿಪತ್ಯ ಮಹಾನ್‌ಮಧ್ವೋ ವ್ಯಾಸಂ ನಿಜಗುರುಂ ಪರಮ್ ।**
**ವಿಜ್ಞಾಪಯಾಮಾಸ ಭೂಮೌ ಸ್ವವ್ಯಾಪೃತಸುದುಷ್ಕರಮ್ ॥8॥**
**ನಿಶಮ್ಯ ತಸ್ಯ ವಾಕ್ಯಾನಿ ವ್ಯಾಸಃ ಸರ್ವಾಂತರಾತ್ಮಕಃ ।**
**ಸ್ವಾಧಿಷ್ಠಾನಾನ್ ಪರಂ ಚಾಷ್ಟೌ ಗ್ರಾವ್ಣಸ್ತಾನ್ ಕೃಪಯಾ ದದೌ ॥9॥**
**ಇತಿ ವಾಯುಪುರಾಣೇಽಪಿ ಪ್ರಮಾಣಂ ಸ್ಪಷ್ಟಮೀರಿತಮ್ ।**

**ಅರ್ಥ:–** ಮುಖ್ಯಪ್ರೇರಕರಾದ ವಾಯುದೇವರ (ಅವತಾರರಾದ) ಮಹಾತ್ಮರಾದ ಮಧ್ವರು ಅಪೇಕ್ಷೆ ಪಟ್ಟು ವ್ಯಾಸಾಶ್ರಮಕ್ಕೆ ಹೋಗಿ ತಮ್ಮ ಗುರುಗಳಾದ ಶ್ರೇಷ್ಠರಾದ ವ್ಯಾಸರಿಗೆ ನಮಸ್ಕರಿಸಿ, ಭೂಮಿಯಲ್ಲಿ ತಮ್ಮ ನಿಯತ ಕಾರ್ಯವು ಬಹು ಕಠಿಣ ವಾದುದೆಂದು ವಿಜ್ಞಾಪಿಸಿದರು. ಅವರ ಮಾತುಗಳನ್ನು ಕೇಳಿ ಸರ್ವಾಂತರ್ಯಾಮಿಯಾದ ವ್ಯಾಸರು ತನ್ನ ಸಾನಿಧ್ಯವುಳ್ಳ ಶ್ರೇಷ್ಠವಾದ ಎಂಟು ಶಿಲೆಗಳನ್ನು (ವ್ಯಾಸಮುಷ್ಟಿಗಳನ್ನು) ಕೃಪೆಯಿಂದ ಕೊಟ್ಟರು. ಹೀಗೆಂದು ವಾಯುಪುರಾಣದಲ್ಲಿಯೂ ಪ್ರಮಾಣವು ಸ್ಪಷ್ಟವಾಗಿ ಉಕ್ತವಾಗಿದೆ.

**ಶ್ಲೋಕ:– ಮಧ್ವೋ ಮುಷ್ಟೀಃ ಬದರ್ಯಾಸ್ತು ಸಮಾನೀಯ ಸಮರ್ಚಯನ್ ॥10॥**
**ಶ್ರೀವಿಷ್ಣುತೀರ್ಥಮುನಯೇ ಷಟ್ ಶಿಲಾಃ ಪ್ರದದೌ ಕಿಲ ।**
**ಅಷ್ಟ ಶಿಷ್ಯಯತೀನಾಂ ತು ಕೃತೇಽಸ್ಥಾಪಯದೇಕಿಕಾಮ್ ॥11॥**
**ವ್ಯಾಸಮುಷ್ಟಿಂ ಮಧ್ಯತಾಲಮಠೇ ಮಧ್ವಗುರುಸ್ತತಃ ।**
**ಏಕಾಂ ಪುನರ್ವ್ಯಾಸಮುಷ್ಟಿಂ ಶ್ರೀಕೃಷ್ಣಸ್ಯ ತು ಸನ್ನಿಧೌ ॥12॥**
**ನ್ಯಧಾತ್‌ಪುನಃ ಸ್ವಾಂಚನಾರ್ಥಂ ಸರ್ವದಾರ್ಚನ ತತ್ಪರಃ॥**

**ಅರ್ಥ:–** ಮಧ್ವರು ಬದರಿಯಿಂದ ವ್ಯಾಸಮುಷ್ಠಿಗಳನ್ನು ತಂದು ಭಕ್ತಿಯಿಂದ ಪೂಜಿಸಿ, ಶ್ರೀ ವಿಷ್ಣುತೀರ್ಥಯತಿಗಳಿಗೆ ಆರು. ಮುಷ್ಟಿಗಳನ್ನು ಕೊಟ್ಟರು. ಅಷ್ಟ ಮಠದ ಯತಿಗಳಿಗಾಗಿ ಒಂದು ವ್ಯಾಸಮುಷ್ಟಿಯನ್ನು ಮಧ್ಯತಾಲ ಮಠದಲ್ಲಿ ಸ್ಥಾಪಿಸಿದರು. ಅನಂತರ ಮಧ್ವಗುರುಗಳು ಪುನಃ ಒಂದು ವ್ಯಾಸಮುಷ್ಠಿಯನ್ನು ಸರ್ವದಾ ಪೂಜಾತತ್ಪರರಾದ ಅವರು, ತಮ್ಮ ಪೂಜೆಗೋಸ್ಕರ ಶ್ರೀಕೃಷ್ಣನ ಸನ್ನಿಧಿಯಲ್ಲಿಟ್ಟರು.

**ಶ್ಲೋಕ:– ತದಾತ್ವೇ ಪದ್ಮನಾಭಾರ್ಯ ಪ್ರಾರ್ಥಯನ್ಮಧ್ವಯೋಗಿನಮ್ ॥13॥**
**ಅಷ್ಟಶಿಷ್ಯಪ್ರಾಂಚನಾರ್ಥಂ ಮಧ್ಯತಾಲಮಠೇ ಗುರೋ ।**
**ಭವತಾ ಸ್ಥಾಪಿತಾ ಮುಷ್ಟಿರ್ವ್ಯಾಸಸ್ಯ ಕೃಪಯಾ ಪ್ರಭೋ ॥14॥**
**ಪಾದಪದ್ಮೈಕಭಕ್ತಾಯ ಮಹ್ಯಮೇಕಾ ಪ್ರದೀಯತಾಮ್ ।**

**ಅರ್ಥ:–** ಆಗ ಪದ್ಮನಾಭತೀರ್ಥರು ಮಧ್ವಾಚಾರ್ಯರನ್ನು ಕುರಿತು "ಗುರುಗಳೇ, ತಮ್ಮ ಶಿಷ್ಯರಾದ ಅಷ್ಟ ಮಠದ ಯತಿಗಳು ಪೂಜಿಸುವ ಸಲುವಾಗಿ ತಮ್ಮಿಂದ ಒಂದು ವ್ಯಾಸಮುಷ್ಟಿಯು ಮಧ್ಯತಾಳಮಠದಲ್ಲಿ ಸ್ಥಾಪಿತವಾಗಿದೆ. ಹೇ ಪ್ರಭೋ! ತಮ್ಮ ಪಾದ ಪದ್ಮಾರಾಧಕನಾದ ನನಗೆ ಒಂದು (ವ್ಯಾಸ ಮುಷ್ಟಿಯನ್ನು) ಕೃಪೆಯಿಂದ ದಯ ಪಾಲಿಸಬೇಕು." ಎಂದು ಪ್ರಾರ್ಥಿಸಿದರು.

**ಶ್ಲೋಕ:– ಇತ್ಯರ್ಥಿತೋ ಮಧ್ವಗುರುಃ ಪದ್ಮನಾಭಸುಯೋಗಿನೇ ॥15॥**
**ಶ್ರೀಕೃಷ್ಣಸನ್ನಿಧೌ ನ್ಯಸ್ತಾಂ ಶಿಲಾಮೇಕಾಮದಾದ್ ಗುರುಃ ।**
**ಶ್ರೀ ಪದ್ಮನಾಭವಂಶಸ್ಥೈಃ ಸಾ ಶಿಲೈಕಾ ಪ್ರಪೂಜ್ಯತೇ ॥16॥**

**ಅರ್ಥ:–** ಈ ರೀತಿಯಾಗಿ ಶ್ರೇಷ್ಠಯೋಗಿಗಳಾದ ಶ್ರೀ ಪದ್ಮನಾಭ ತೀರ್ಥರಿಂದ ಪ್ರಾರ್ಥಿತರಾದ ಶ್ರೀ ಮಧ್ವಗುರುಗಳು (ಉಡುಪಿ) ಶ್ರೀ ಕೃಷ್ಣ ಸನ್ನಿಧಾನದಲ್ಲಿ ಇಟ್ಟ ವ್ಯಾಸಮುಷ್ಟಿಯೊಂದನ್ನು ಅವರಿಗೆ ಕೊಟ್ಟರು ಆ ವ್ಯಾಸಶಿಲೆಯು ಶ್ರೀ ಪದ್ಮನಾಭತೀರ್ಥರ ವಂಶದವರಿಂದ ಪೂಜಿಸಲ್ಪಡುತ್ತಿದೆ.

**ಶ್ಲೋಕ:– ಶ್ರೀ ವಿಷ್ಣುತೀರ್ಥವಶಗಾ ಸುಬ್ರಮಣ್ಯಮಠೇಽಧುನಾ ।**
**ಅಭೇಧ್ಯ ಸಂಪುಟೇ ಭಾತಿ ಪಂಚಕಂ ಬಹಿರೇಕಿಕಾ ॥17॥**
**ಸ್ಪಷ್ಟಂ ಪ್ರದರ್ಶತೇ ವ್ಯಾಸಶಿಲಾ ಭದ್ರಾಽಧುನಾಽಪಿ ಹಿ ।**

**ಅರ್ಥ:–** ಶ್ರೀ ವಿಷ್ಣುತೀರ್ಥರ ವಶದಲ್ಲಿದ್ದ (ಆರು ವ್ಯಾಸ ಮುಷ್ಟಿಗಳು) ಇಂದಿಗೂ ಕೂಡ ಸುಬ್ರಮ್ಮಣ್ಯ ಮಠದಲ್ಲಿ ಐದು ಅಭೇಧ್ಯ ಸಂಪುಟದಲ್ಲಿಯೂ ಒಂದು ಹೊರಗಡೆಯೂ ಶೋಭಿಸುತ್ತಿದೆ. ಮಂಗಳಕರಗಳಾದ ವ್ಯಾಸಮುಷ್ಟಿಗಳು ಇಂದಿಗೂ ಸ್ಪಷ್ಟವಾಗಿ ಕಾಣುತ್ತಿವೆ.

**ಶ್ಲೋಕ:– ಮಧ್ಯತಾಲಗತೋ ವಿಪ್ರಸ್ತಾಂ ಶಿಲಾಂ ನ ಚ ದೃಷ್ಟವಾನ್ ॥18॥**

ಅರ್ಥ:– (ವ್ಯಾಸರಾಯರು ಮಧ್ಯತಾಳಮಠದಲ್ಲಿ ಇದ್ದ ವ್ಯಾಸ ಮುಷ್ಟಿಯನ್ನು ತೆಗೆದುಕೊಂಡು ಹೋದ ಕಾರಣ) ಮಧ್ಯತಾಳ ಮಠದಲ್ಲಿದ್ದ ವ್ಯಾಸಶಿಲೆಯು ಅಲ್ಲಿದ್ದ ಬ್ರಾಹ್ಮಣನಿಗೆ ಕಾಣಿಸಲಿಲ್ಲ.

**ಶ್ಲೋಕ:–** **ಭೀತೋ ರೂಪ್ಯಾಲಯಸ್ಥೇಭ್ಯೋ ಗುರುಭ್ಯಃ ಸ ನ್ಯವೀವಿದತ್ ।**
**ಕರ್ತವ್ಯಮೂಢಾ ಯತಯಃ ವಾದಿರಾಜಗುರುಂ ಪ್ರತಿ ॥19॥**
**ಶಕ್ತಸ್ತ್ವಮೇವ ಕಾರ್ಯೇಽಸ್ಮಿನ್ ವ್ಯಾಸಾರ್ಚಾನಯನೇ ದ್ರುತಮ್ ।**
**ಯದ್ಯಾನೇಷ್ಯಸಿ ತತ್ಪೂಜಾಂ ತ್ವಮೇವ ಕುರು ಸನ್ಮತೇ ॥20॥**
**ಇತಿ ದೇಶಾಂತರಸ್ಥಸ್ಸ ಬೋಧಿತೋ ವಾದಿರಾಟ್ ಕೃತೀ ।**
**ವ್ಯಾಸಂಗವ್ಯಾಜಮಾಸಾದ್ಯ ವ್ಯಾಸಾರ್ಯಂ ಸಮುಪಾಗತಃ ॥21॥**

**ಅರ್ಥ:–** ಭೀತನಾದ ಆ ಬ್ರಾಹ್ಮಣನು ಉಡುಪಿಯಲ್ಲಿರುವ ಗುರುಗಳಿಗೆ (ಅಷ್ಟ ಮಠಾಧೀಶರಿಗೆ) (ಮಧ್ಯಕಾಲಮಠದ ಲ್ಲಿದ್ದ ವ್ಯಾಸಮುಷ್ಟಿಕೆಯನ್ನು ವ್ಯಾಸರಾಜರು ತೆಗೆದುಕೊಂಡು ಹೋಗಿರುವ ವಿಷಯವನ್ನು ನಿವೇದಿಸಿದನು. ಏನು ಮಾಡಬೇಕೆಂದು ಅರಿಯದ ಆ ಯತಿಗಳು ವಾದಿರಾಜರನ್ನು ಕುರಿತು "ವ್ಯಾಸಮುಷ್ಟಿಯನ್ನು ಶೀಘ್ರವಾಗಿ ಮರಳಿ ತರುವ ಈ ಕಾರ್ಯದಲ್ಲಿ ತಾವೊಬ್ಬರೇ ಶಕ್ತರು. ತಾವು ಮರಳಿ ತಂದರೆ ಆ ವ್ಯಾಸಮುಷ್ಟಿಯ ಪೂಜೆಯನ್ನು ತಮ್ಮ ಮಠದಲ್ಲಿ ತಾವೇ ಮಾಡಿರಿ. ಎಂದು ಬೇರೆ ದೇಶದಲ್ಲಿದ್ದ ವಾದಿರಾಜರಿಗೆ ತಿಳಿಸಲ್ಪಡಲು, ಜ್ಞಾನಿಗಳಾದ ವಾದಿರಾಜರು (ಅದನ್ನು ತರಲು) ವ್ಯಾಸಂಗನೆಪದಿಂದ ವ್ಯಾಸರಾಯರಲ್ಲಿಗೆ ಹೋದರು.

**ಶ್ಲೋಕ:–** **ಶ್ರೀಮಾನ್ ರಾಮೋ ರಾವಣಾದಿಹತ್ಯಾಂ ಕೃತ್ವಾಽಘವರ್ಜಿತಃ ।**
**ತಥಾಪಿ ದ್ವಿಜಘಾತೇನ ದೋಷೋಽಸ್ತೀತಿ ಪ್ರದರ್ಶಯನ್ ॥22॥**
**ಲೋಕಶಿಕ್ಷಾರ್ಥಮೇವಾಸೌ ಸೇತೌ ರಾಮೇಶ್ವರಾಭಿಧಮ್ ।**
**ಶಿವಲಿಂಗಮ್ ಪ್ರತಿಷ್ಠಾಪ್ಯ ಬ್ರಹ್ಮಹತ್ಯಾಘಸಂಚಯಮ್ ॥23॥**
**ಪ್ರತಿಗೃಹ್ಣಾತಿ ಮತ್ತೋಯಸ್ತಂ ದ್ವಿಜೋತ್ತಮಮಂಜಸಾ।**
**ಉದ್ಧರಿಷ್ಯೇಹಮಿತ್ಯೂಚೇ ತದಾ ಕಶ್ಚಿತ್ ತಪೋಧನಃ ॥24॥**
**ಪ್ರತಿಗೃಹ್ಣಾ ಮ್ಯಹಂ ತ್ವತ್ತಃ ಸೀತಾಜಾನೇ ಪ್ರದೇಹಿ ಮೇ।**
**ಲೋಕಮೋಹಕವಾಕ್ಯಸ್ಯ ತಾತ್ಪರ್ಯಮವಿದನ್ ದ್ವಿಜಃ**
**ಸ್ವಪ್ರತಿಷ್ಠಾಖ್ಯಾಪನಾಯ ಗೃಹ್ಣಾಮೀತ್ಯಬ್ರವೀತ್ ಪ್ರಭುಮ್ ॥25॥**

**ಅರ್ಥ:–** (ತ್ರೇತಾಯುಗದಲ್ಲಿ ರಾವಣಾದಿಗಳನ್ನು ಸಂಹಾರ ಮಾಡಿದ ಮೇಲೆ) ಪಾಪರಹಿತರಾದಾಗ್ಯೂ, ರಾವಣಾ ದಿಗಳನ್ನು ಕೊಂದ ಮೇಲೆ ಶ್ರೀರಾಮದೇವರು ಬ್ರಹ್ಮಹತ್ಯಾ ದೋಷ ಬಂದಿತೆಂದು ಪ್ರದರ್ಶಿಸುತ್ತಾ ಲೋಕಶಿಕ್ಷಾರ್ಥವಾಗಿ ರಾಮೇಶ್ವರದಲ್ಲಿ (ಸೇತುವಿನಲ್ಲಿ) 'ರಾಮೇಶ್ವರ'ನೆಂಬ ಹೆಸರಿನ ಶಿವಲಿಂಗವನ್ನು ಸ್ಥಾಪಿಸಿ "ಯಾರಾದರೂ ನನ್ನ ಬ್ರಹ್ಮಹತ್ಯಾ ಪಾಪ ಸಮೂಹವನ್ನು ಸ್ವೀಕರಿಸಿದರೆ ಅಂತಹ ಬ್ರಾಹ್ಮಣ ಶ್ರೇಷ್ಠನನ್ನು ನಿಶ್ಚಯವಾಗಿಯೂ ಉದ್ಧಾರ ಮಾಡುವೆನು." ಎಂದು ಹೇಳಿದರು. ಆಗ ಲೋಕಮೋಹಕವಾದ ಮಾತಿನ ತಾತ್ಪರ್ಯವನ್ನು ಗ್ರಹಿಸದೆ, ಅಲ್ಲಿದ್ದ ತಪೋಧನನೊಬ್ಬನು ತನ್ನ ಪ್ರತಿಷ್ಠೆಯನ್ನು ಪ್ರಖ್ಯಾತಗೊಳಿಸಲು "ಹೇ ಸೀತಾಪತೇ! ನಿನ್ನಿಂದ ನಾನು ಸ್ವೀಕರಿಸುವೆನು ಕೊಡು" ಎಂಬುದಾಗಿ ಪ್ರಭುವಾದ ಶ್ರೀ ರಾಮದೇವರಿಗೆ ಹೇಳಿದನು.

**ಟಿಪ್ಪಣಿ:–** (ಇದು ಪ್ರಾರಬ್ಧಕರ್ಮ ಭೋಗಕ್ಕೆ ನಿಮಿತ್ತಕಾರಣವಾಗಿ ಆ ತಪೋಧನನಿಗೆ ಬ್ರಹ್ಮರಾಕ್ಷಸ ಜನ್ಮ ಬರುವಂತಾಯಿತು)

**ಶ್ಲೋಕ:–** **ಕೃಪಾವಾನ್ ರಾಮಭದ್ರಸ್ತು ಪ್ರಸೀದನ್ನಿದಮಬ್ರವೀತ್ ।**
**ಬ್ರಹ್ಮರಾಕ್ಷಸತಾಂ ಪ್ರಾಪ್ತೋ ಭಾವಿವಾಯು ನಿಷೇವಣಾತ್ ॥26॥**
**ಭಾವಿರುದ್ರಪದಂ ಪ್ರಾಪ್ಯ ಲೋಕಪೂಜ್ಯೋ ಭವಿಷ್ಯಸಿ ।**
**ಸ ಬ್ರಹ್ಮರಾಕ್ಷಸೋ ಭೂತ್ವಾ ಬದರೀಕಾನನೇಽವಸತ್ ॥27॥**

**ಅರ್ಥ:–** ಕೃಪಾವಂತರಾದ ಶ್ರೀರಾಮದೇವರು ಅವನನ್ನು ಅನುಗ್ರಹಿಸುತ್ತಾ "ಬ್ರಹ್ಮರಾಕ್ಷಸತನವನ್ನು ಹೊಂದುವ ನೀನು ಭಾವೀ ವಾಯುದೇವರನ್ನು ಸೇವಿಸುವುದರಿಂದ ಭಾವೀ ರುದ್ರ ಪದವಿಯನ್ನು ಹೊಂದಿ ಲೋಕ ಪೂಜ್ಯನಾಗುವಿ" ಎಂದು ಹೇಳಿದರು. ಆ ಬ್ರಾಹ್ಮಣನು ರಾಕ್ಷಸನಾಗಿ ಬದರಿಕಾಶ್ರಮ ವನವನ್ನು ಪ್ರವೇಶಿಸಿದನು.

**ಶ್ಲೋಕ:–** **ಏಕಾಂಶೇನಾಥ ಸಂಜಜ್ಞೇ ದ್ವಿಜವಂಶೇಕತಾ ಕಲೌ ಯುಗೇ ।**
**ನಾರಾಯಣಾಚಾರ್ಯನಾಮಾ ನಾರಲಗ್ರಾಮಗೋ ದ್ವಿಜಃ ॥28॥**

**ಅರ್ಥ:–** ಕಲಿಯುಗದಲ್ಲಿ ಆ ಬ್ರಾಹ್ಮಣನು ಒಂದಂಶದಿಂದ ಬ್ರಾಹ್ಮಣ ಕುಲದಲ್ಲಿ ನಾರಳಗ್ರಾಮದಲ್ಲಿ ನಾರಾಯಣಾಚಾರ್ಯಯೆಂಬ ಹೆಸರಿನಿಂದ ಹುಟ್ಟಿದನು.

**ಶ್ಲೋಕ:–** **ಶ್ರೀ ವಾದಿರಾಜಭೃತ್ಯಸ್ಸನ್ನುವಾಸ ಗುರುಸನ್ನಿಧೌ ।**
**ಸಾಧನದ್ವಾದಶೀ ತಿಥ್ಯಾಂ ವ್ಯಾಸರಾಜೋ ನಿರೀಕ್ಷತೇ ॥29॥**
**ಭಿಕ್ಷಾರ್ಥಮಿತಿ ಹಿ ಶ್ರುತ್ವಾ ಸ್ನಾತಃ ಶೀಘ್ರಂ ಸ ವಾದಿರಾಟ್ ।**
**ಭಿಕ್ಷಾಂ ಸ್ವೀಕೃತ್ಯ ಪಶ್ಚಾತ್ತು ನದ್ಯಾಸ್ತೀರೇ ಪುನಸ್ಸುಧೀಃ ॥30॥**
**ಯಥಾಭುಕ್ತಂ ಭುಕ್ತವಸ್ತು ನಿಚಯಾನ್ಮುಖತಃ ಕ್ಷಿಪನ್ ।**
**ಸಂಶುದ್ಧಜಠರಃ ಸ್ನಾತ್ವಾ ಜಪ್ಯಾನ್ಮಂತ್ರಾಂ ಜಪನ್ನಭೂತ್ ॥31॥**

**ಅರ್ಥ:–** ಆ ನಾರಾಯಣಾಚಾರ್ಯರು ಶ್ರೀ ವಾದಿರಾಜರ ಸೇವಕರಾಗಿ, ಗುರುಗಳ ಸನ್ನಿಧಿಯಲ್ಲಿ ವಾಸವಾಗಿದ್ದರು. (ಶ್ರೀ ವಾದಿರಾಜರು ವ್ಯಾಸಮುಷ್ಟಿಯನ್ನು ತರಲು ಶ್ರೀ ವ್ಯಾಸರಾಯರ ಬಳಿಗೆ ಹೋದಾಗ. ಶ್ರೀ ನಾರಾಯಣಾಚಾರ್ಯರೂ ಅವರೊಂದಿಗೆ ಹೋದರು.) ಸಾಧನದ್ವಾದಶಿ ತಿಥಿಯೊಂದರಲ್ಲಿ ವ್ಯಾಸರಾಯರು ಭಿಕ್ಷೆ ಸ್ವೀಕರಿಸಲು ತಮ್ಮ ನಿರೀಕ್ಷೆಯ ಲ್ಲಿರುವುದನ್ನು ಕೇಳಿದ ವಾದಿರಾಜರೂ ಶೀಘ್ರವಾಗಿ ಸ್ನಾನ ಮಾಡಿ (ಜಪಾದಿ ಅನುಷ್ಠಾನ ರಹಿತರಾಗಿ) ಭಿಕ್ಷೆಯನ್ನು ಸ್ವೀಕಾರ ಮಾಡಿ, ಅನಂತರ ನದಿಯ ತೀರಕ್ಕೆ ಹೋಗಿ ಜ್ಞಾನಿಗಳಾದ ಅವರು ಪುನಃ ಊಟ ಪದಾರ್ಥಗಳನ್ನು ಊಟ ಮಾಡುವ ಮುಂಚೆ ಇದ್ದ ಸ್ಥಿತಿಯಲ್ಲಿಯೇ ಬಾಯಿಯಿಂದ ಹೊರಗೆ ತೆಗೆದು ಇರಿಸಿದರು. ಶುದ್ಧ ಜಠರವುಳ್ಳವರಾಗಿ ವಾದಿರಾಜರು ಸ್ನಾನ ಮಾಡಿ ಮಂತ್ರಗಳನ್ನು ಜಪಿಸುತ್ತಾ ಜಪವನ್ನು ಮಾಡಿದರು.

**ಶ್ಲೋಕ:–** **ನಾರಾಯಣಾರ್ಯೋಽಕೃತನಿತ್ಯಕೃತ್ಯಕಂ ಗುರುಂ ಸುಭುಕ್ತಂ ಕುತುಕಾತ್ಪರೀಕ್ಷಿತುಮ್। ನದೀ ತಟೇ**
**ವಿಸ್ಮಯಕಾರಿತತ್ಕ್ರಿಯಾಂ ದೃಷ್ಟ್ವಾ ತರೋಃ ಸ್ಕಂಧಗತೋ ನ್ಯಲೀಯತ ॥32॥**

**ಅರ್ಥ:–** ನಿತ್ಯ ಕರ್ಮಗಳನ್ನು ಆಚರಿಸದೆ ಗುರುಗಳು ಊಟ ಮಾಡಿದುದನ್ನು (ವೀಕ್ಷಿಸಿದ) ನಾರಾಯಣಾಚಾರ್ಯರು ಕುತೂಹಲದಿಂದ(ರಹಸ್ಯವನ್ನು) ಪರೀಕ್ಷಿಸುವದಕ್ಕಾಗಿ (ಅವರನ್ನು ಹಿಂಬಾಲಿಸಿದರು.) ನದೀ ತೀರದಲ್ಲಿ ವಿಸ್ಮಯಜನಕ ಈ ಕಾರ್ಯಗಳನ್ನು ನೋಡಿ ಮರದ ಮೇಲೆ ಅವಿತುಕೊಂಡರು.

**ಶ್ಲೋಕ:–** **ವಾದಿರಾಜಃ ಸಮಾಪ್ಯಾತ್ಮಜಪಕರ್ಮ ಸಮುತ್ಥಿತಃ ।**
**ಸಮಾಗಚ್ಛಂಸ್ತರೋರ್ಮಧ್ಯೇ ನಿಲೀನಂ ದ್ವಿಜಮೈಕ್ಷತ ॥33॥**

**ಅರ್ಥ:–** ತಮ್ಮ ಜಪಕರ್ಮವನ್ನು ಮುಗಿಸಿ, ಆಸನದಿಂದ ಎದ್ದು, ವಾದಿರಾಜರು ಹಿಂತಿರುಗುವಾಗ ಮಠದ ಮಧ್ಯದಲ್ಲಿ ಅವಿತುಕೊಂಡಿದ್ದ ಬ್ರಾಹ್ಮಣನನ್ನು ನೋಡಿದರು.

**ಶ್ಲೋಕ:–** **ಪರೀಕ್ಷಾಮಂತುನಾ ಕ್ರುದ್ಧಃ ಬ್ರಹ್ಮರಕ್ಷೋ ಭವೇತಿ ಸಃ ।**
**ಶಶಾಪ ಗುರುರಾಜಸ್ತಂ ದ್ವಿಜಂ ಶರಣಮಾಗತಮ್ ॥34॥**
**ಆಕಾಮಾವೈನ ಕಃ ಸ್ನಾತ ಇತ್ಯಾಕ್ರೋಶನ್ವನೇ ಚರ ।**
**ಯಸ್ಮಾತ್ ಪ್ರಾಪ್ಸ್ಯಸ್ಯುತ್ತರಂ ತಂ ಮುಕ್ತಶಾಪಸ್ತತೋ ಭವೇಃ ॥35॥**

**ಅರ್ಥ:–** ಸಿಟ್ಟುಗೊಂಡ ಗುರುಗಳು, ಪರೀಕ್ಷಿಸಿದ ಅಪರಾಧಕ್ಕಾಗಿ ಆ ಬ್ರಾಹ್ಮಣನನ್ನು ಬ್ರಹ್ಮರಾಕ್ಷಸನಾಗೆಂದು ಶಪಿಸಿದರು. ಶರಣಾಗತನಾದ ಆ ಬ್ರಾಹ್ಮಣನಿಗೆ "ಆ ಕಾಮಾವೈಸ್ನಾನ ಮಾಡದವರು ಯಾರು? ಎಂಬುದಾಗಿ ಕೂಗುತ್ತಾ ಕಾಡಿನಲ್ಲಿ ಸಂಚರಿಸುತ್ತಿರು. ನೀನು ಸರಿಯಾದ ಉತ್ತರವನ್ನು ಪಡೆದಾಗ ಶಾಪದಿಂದ ಬಿಡುಗಡೆ ಹೊಂದುವಿ"

**ಶ್ಲೋಕ:–** **ಇತ್ಯಾಜ್ಞಪ್ತಸ್ಸ ದುರ್ದೈವಾದ್ಬ್ರಹ್ಮರಾಕ್ಷಸತಾಂ ಗತಃ ।**
**ವನಾದ್ವನಂ ವ್ರಜನ್ ಘೋರೋ ಬದರೀಮಾಗತಸ್ತತಃ ॥36॥**

**ಅರ್ಥ:–** ಈರೀತಿಯಾಗಿ (ಶ್ರೀವಾದಿರಾಜರಿಂದ) ಆಜ್ಞಾಪ್ತನಾದ ಆ ಬ್ರಾಹ್ಮಣನು ದುರ್ದೈವದಿಂದ ಬ್ರಹ್ಮರಾಕ್ಷಸತನವನ್ನು ಹೊಂದಿದನು. ಅವನು ಕಾಡಿನಿಂದ ಕಾಡಿಗೆ ತಿರುಗುತ್ತಾ ಬದರೀಕಾಶ್ರಮದ ಘೋರವಾದ ವನವನ್ನು ಬಂದು ಸೇರಿದನು.

**ಶ್ಲೋಕ:–** **ತತ್ರ ಸ್ವಾಂಶಂ ಬ್ರಹ್ಮರಕ್ಷೋರೂಪಂ ದೃಷ್ಟ್ವಾಽಥ ವಿಸ್ಮಿತಃ ।**
**ತೇನೈಕ್ಯಂ ಸಹಸಾ ಪ್ರಾಪ್ಯ ತತ್ರೈವಾಚರದಾದರಾತ್ ॥37॥**

**ಅರ್ಥ:–** ಅಲ್ಲಿ ತನ್ನ ಅಂಶವಾದ ಬ್ರಹ್ಮರಾಕ್ಷಸ ರೂಪವನ್ನು ನೋಡಿ ವಿಸ್ಮಿತನಾದನು. ಆ ರೂಪದಲ್ಲಿ ಕೂಡಲೇ ಐಕ್ಯ ಹೊಂದಿ (ಶಾಪದಿಂದ ಬಿಡುಗಡೆಯಾಗುವ) ಆಸೆಯಿಂದ ಅಲ್ಲಿಯೇ ಸಂಚರಿಸುತ್ತಿದ್ದನು.

**ಶ್ಲೋಕ:–** **ಕಾಲಾಂತರೇ ಗುರುಂ ಬದರೀಕ್ಷೇತ್ರ ಗಾಮಿನಮ್ ।**
**ವಾದಿರಾಜಂ ಸಮಾಲೋಕ್ಯ ಬ್ರಹ್ಮರಾಕ್ಷಸಯೋನಿಗಃ ॥38॥**

**ಅರ್ಥ:–** ಕಾಲಾಂತರದಲ್ಲಿ ಬದರೀಕ್ಷೇತ್ರಕ್ಕೆ ಹೋಗುತ್ತಿದ್ದ ವಾದಿರಾಜಗುರುಗಳನ್ನು ಬ್ರಹ್ಮರಾಕ್ಷಸನು ನೋಡಿದನು.

**ಶ್ಲೋಕ:–** **ಯಥಾ ಪ್ರಾಗ್ ಗುರುಣಾऽऽದಿಷ್ಟಂ ಕ್ರೂರೋऽಪೃಚ್ಛತ್ತಥೈವ ಹಿ ।**
**ಆಷಾಢೇ ಕಾರ್ತಿಕೇ ಮಾಘೇ ವೈಶಾಖೇ ಸ್ನಾನತತ್ಪರಃ ॥39॥**
**ಬ್ರಹ್ಮರಾಕ್ಷಸ ಪೈಶಾಚಯೋರ್ನೇರ್ಮುಕ್ತೋ ಭವೇದ್ ಧ್ರುವಮ್ ।**
**ಇತಿ ಶ್ರೀವಾದಿರಾಜಸ್ಯ ಪ್ರತ್ಯುತ್ತರ ವಚೋऽಮೃತಾತ್ ॥40॥**
**ಬ್ರಹ್ಮರಾಕ್ಷಸತಾಂ ತ್ಯಕ್ತ್ವಾ ಸುರೂಪೋऽಗ್ರೇ ಗುರುರ್ನಮನ್ ।**

**ಅರ್ಥ:–** ಹಿಂದೆ ಗುರುಗಳಿಂದ ಹೇಗೆ ಆದಿಷ್ಟವಾಗಿತ್ತೋ ಹಾಗೆಯೇ ಕ್ರೂರನಾದ ಬ್ರಹ್ಮರಾಕ್ಷಸನು ಅವರನ್ನೇ ಪ್ರಶ್ನಿಸಿದನು. (ಆಗ ವಾದಿರಾಜರು) ಆಷಾಢಮಾಸದಲ್ಲಿ ಕಾರ್ತೀಕ ಮಾಸದಲ್ಲಿ ಮಾಘಮಾಸದಲ್ಲಿ ವೈಶಾಖಮಾಸದಲ್ಲಿ ಸ್ನಾನ ತತ್ಪರನಾದವನು ಬ್ರಹ್ಮರಾಕ್ಷಸ ಪೈಶಾಚಿಕ ಜನ್ಮದಿಂದ ನಿಶ್ಚಯಾಗಿಯೂ ಮುಕ್ತನಾಗುವನು. ಎಂದರು. ವಾದಿರಾಜರ ಪ್ರತ್ಯುತ್ತರ ವಚನಾಮೃತದಿಂದ (ಆ ದ್ವಿಜನು) ಬ್ರಹ್ಮರಾಕ್ಷಸತವನ್ನು ಬಿಟ್ಟು ಸುರೂಪ ಹೊಂದಿ ವಾದಿರಾಜಗುರುಗಳ ಮುಂದೆ ನಿಂತು ನಮಸ್ಕರಿಸಿದನು.

**ಶ್ಲೋಕ:–** **ಇತಃ ಪರಂ ಭೂತರಾಜ ಇತಿ ಖ್ಯಾತೋ ಮದಂತಿಕೇ ॥41॥**
**ವಸನ್ನಗ್ರೇ ವಹಂದೋಲಾಂ ಮದೀಯಾಂ ಸುಕೃತೀ ಭವೇಃ ।**
**ಭಾವಿಜನ್ಮನಿ ರುದ್ರಸ್ತ್ವಂ ಭವಿತಾ ನಾತ್ರ ಸಂಶಯಃ ॥42॥**

**ಅರ್ಥ:–** "ಇನ್ನು ಮುಂದೆ ಭೂತರಾಜನೆಂದು ಪ್ರಸಿದ್ಧನಾಗಿ ನನ್ನ ಸಮೀಪದಲ್ಲೆ ಇರುತ್ತಾ, ನನ್ನ ಪಲ್ಲಕ್ಕಿಯ ಮುಂಭಾಗವನ್ನು ಹೊರುತ್ತಾ ಸುಕೃತವುಳ್ಳವನಾಗು, ಮುಂದಿನ ಜನ್ಮದಲ್ಲಿ ಬ್ರಹ್ಮಕಲ್ಪದಲ್ಲಿ, ರುದ್ರನಾಗುವಿ ಈ ವಿಷಯದಲ್ಲಿ ಸಂಶಯವಿಲ್ಲ" ಎಂದು ನುಡಿದರು.

**ಶ್ಲೋಕ:–** **ಭಾವಿರುದ್ರಾನುಗ್ರಹಸ್ಯ ಕರಣಾದೃಜುತಾಂ ಸ್ವಯಮ್ ।**
**ಭಾವಿವಾಯುತ್ವಮಪಿ ಚ ಸ್ವಸ್ಮಿನ್ಸೂಚಿತವಾನ್ ಗುರುಃ ॥43॥**

**ಅರ್ಥ:–** ಭಾವಿರುದ್ರರಿಗೆ ಅನುಗ್ರಹಿಸಿದ ಕಾರಣ; ತಮಗೆ ಋಜುತನವನ್ನೂ ಹಾಗೂ ಭಾವಿವಾಯುತ್ವವನ್ನೂ, ಸ್ವಯಂ ವಾದಿರಾಜಗುರುಗಳೇ ಸೂಚಿಸಿದ್ದಾರೆ

**ಶ್ಲೋಕ:–** **ಇತಿ ಶ್ರೀಭಾವಿರುದ್ರತ್ವಪದಯೋಗ್ಯೋऽಘ ಮೋಚಿತಃ ।**
**ವಾದಿರಾಜಸ್ಯ ರಾಮಸ್ಯ ಪ್ರಸಾದಾದವಸತ್ಕೃತೀ ॥44॥**

**ಅರ್ಥ:–** ಹೀಗೆ ಪಾಪ ಮೋಚನೆ ಹೊಂದಿದ ಭಾವಿರುದ್ರಪದವಿಯೋಗ್ಯ ಭೂತರಾಜರು, ವಾದಿರಾಜರ, ರಾಮದೇವರ ಪ್ರಸಾದದಿಂದ ಸುಕೃತವುಳ್ಳವರಾಗಿ ವಾಸಮಾಡಿದರು.

**ಶ್ಲೋಕ:–** **ಕದಾಚಿದ್ ವ್ಯಾಸಯತಿನಾ ಸ್ವರ್ಚ್ಯದೇವಸ್ಯ ಪೂಜನೇ ।**
**ಪ್ರಾಭಾತಿಕೇ ನಿಯುಕ್ತಸ್ಸ ವಾದಿರಾಡರ್ಚನಾ ತ್ವರಮ್ ॥45॥**

**ಅರ್ಥ:–** ಒಮ್ಮೆ ತಮ್ಮದೇವರನ್ನು ಪೂಜಿಸಲು ವ್ಯಾಸರಾಯಯತಿಗಳಿಂದ ಪ್ರಾತಃ ಕಾಲದಲ್ಲಿ ನಿಯೋಜಿತರಾದ ವಾ ದಿರಾಜರು ಪೂಜೆಯಾದ ನಂತರ

**ಶ್ಲೋಕ:–** **ವ್ಯಾಸಮುಷ್ಟಿಂ ಗೃಹಿತ್ವಾऽಥ ಪ್ರತ್ಯಾಗಾನ್ಮಧ್ವವಾಟಕಮ್ ।**
**ವ್ಯಾಸರಾಜೋ ಮಠೀಯೈಸ್ತದ್ವಿಜ್ಞಾಯ ಪ್ರಹಸನ್ನವೈತ್ ॥46॥**
**ನಿಕೃತೇರ್ನಿಕೃತಿರ್ನೈವ ದೋಷಾಯ ಭವತಿ ಕ್ವಚಿತ್ ।**
**ಅಲಮೇತಾವತಾ ವ್ಯಾಸಪೂಜಾಪುಣ್ಯೇನ ನಸ್ತ್ವಿತಿ ॥ ॥47॥**

**ಅರ್ಥ:–** ವ್ಯಾಸಮುಷ್ಠಿಯನ್ನು ತೆಗೆದುಕೊಂಡು ಮಧ್ವವಾಟ ಮಠವನ್ನು ಕುರಿತು ಪ್ರಯಾಣಿಸಿದರು. ತಮ್ಮ ಮಠದವರಿಂದ ತಿಳಿದ ವ್ಯಾಸರಾಜರು ನಗುತ್ತಾ "ಹೇಗೆ ಬಂತೋ, ಹಾಗೆ ಹೋಯಿತು ನಮಗಾದರೋ ಇಲ್ಲಿಯವರೆಗಿನ ಪೂಜೆಯ ಪುಣ್ಯವೇ ಸಾಕು" ಎಂದರು.

**ಶ್ಲೋಕ:–** **ತದಾರಭ್ಯ ವ್ಯಾಸಮುಷ್ಟಿರ್ಮಧ್ವತಾಲಮಠೇ ಪುನಃ ।**
**ಶ್ರೀವಾದಿರಾಜವಶತಾಮಾಪಾದ್ಯಾಪಿ ತದೀಕ್ಷ್ಯತೇ ॥48॥**

**ಅರ್ಥ:–** ಅಂದಿನಿಂದ ಪುನಃ ವ್ಯಾಸಮುಷ್ಟಿಯು ಮಧ್ವತಾಳ ಮಠದಲ್ಲಿ ಶ್ರೀ ವಾದಿರಾಜರ ವಶದಲ್ಲಿರುವುದಾಯಿತು. ಈಗಲೂ ನೋಡಬಹುದು.

**ಟಿಪ್ಪಣಿ:–** ವ್ಯಾಸಮುಷ್ಟಿಯು ಈಗ ಸೋದೆ ಮಠದಲ್ಲಿಯೇ ಇದೆ.

**ಶ್ಲೋಕ:– ಮಾಸದ್ವಿತಯ ಪರ್ಯಾಯಪೂಜಾಂ ಮಧ್ವಸುಕಲ್ಪಿತಾಮ್ ।**
**ವರ್ಷದ್ವಿತಯ ಪರ್ಯಂತಾಂ ಕಲ್ಪಯಾಮಾಸ ಸನ್ಮತಿಃ ॥49॥**

**ಅರ್ಥ:–** ಮಧ್ವಾಚಾರ್ಯರಿಂದ ವ್ಯವಸ್ಥಿತವಾದ ಎರಡು ತಿಂಗಳುಕಾಲದ (ಶ್ರೀಕೃಷ್ಣ) ಪರ್ಯಾಯ ಪೂಜೆಯನ್ನು ಜ್ಞಾನಿಗಳಾದ ವಾದಿರಾಜರು ಎರಡು ವರ್ಷಗಳ ಕಾಲಕ್ಕೆ ವಿಸ್ತರಿಸಿದರು.

**ಶ್ಲೋಕ:– ಕಲ್ಪಯಾಮಾಸ ಸಂಚಾರೇ ಸೌಕರ್ಯಂ ಯತಿನಾಂ ತತಃ ।**
**ತಥಾ ಪ್ರತ್ಯೇಕಮಷ್ಟಾನಾಂ ಯತೀನಾಂ ನಿರ್ಮಮೇ ಮಠಮ್ ॥50॥**

**ಅರ್ಥ:–** ಅದರಿಂದ (ಅಷ್ಟಮಠದ) ಯತಿಗಳಿಗೆ ಸಂಚಾರ ಮಾಡಲು ಸೌಕರ್ಯವನ್ನುಂಟು ಮಾಡಿದರು. ಹಾಗೆಯೇ ಅಷ್ಟ ಮಠದ ಯತಿಗಳಿಗೆ ಪ್ರತ್ಯೇಕ ಪ್ರತ್ಯೇಕ ಮಠವನ್ನು ನಿರ್ಮಿಸಿದರು.

**ಶ್ಲೋಕ:– ತತಃ ಪ್ರಭೃತಿ ಶ್ರೀಕೃಷ್ಣ ಪರ್ಯಾಯಮಹ ಸಂಭ್ರಮಃ ।**
**ಅತ್ಯಂತಕೌತುಕೋತ್ಸಾಹಹೇತುಃ ಸಮ್ಯಗ್ ವಿಜೃಂಭತೇ ॥51॥**

**ಅರ್ಥ:–** ಅಲ್ಲಿಂದ ಶ್ರೀ ಕೃಷ್ಣಪರ್ಯಾಯವು ಮಹಾಸಂಭ್ರಮಯುಕ್ತವಾಗಿ ಅತ್ಯಂತ ಕುತೂಹಲಕಾರಕ ಉತ್ಸಾಹಕ್ಕೆ ಕಾರಣವಾಗಿ ಚೆನ್ನಾಗಿ ಶೋಭಿಸಿತು.

**ಶ್ಲೋಕ:– ಪುನಃ ಸಂಚರಣಾಸಕ್ತೋ ಗತೋಽಯೋಧ್ಯಾಂ ಪುರೀಂ ಮುನಿಃ ।**
**ತತ್ರತ್ಯ ಹನುಮತ್‌ತಾರ್ಕ್ಷ್ಯ ಪ್ರತಿಮೇ ರೂಪ್ಯ ಪೀಠಕಮ್ ॥52॥**
**ಆನೀಯ ಕೃಷ್ಣಪುರತಃ ಸ್ಥಾಪಯಾಮಾಸ ಮೋದತಃ**

**ಅರ್ಥ:–** ಸಂಚಾರಸಕ್ತರಾದ ಶ್ರೀ ವಾದಿರಾಜಮುನಿಗಳು ಪುನಃ ಅಯೋಧ್ಯಾಪಟ್ಟಣಕ್ಕೆ ಬಂದರು. ಅಲ್ಲಿದ್ದ ಗರುಡಮುಖ್ಯಪ್ರಾಣರ ಪ್ರತಿಮೆಗಳನ್ನು ಉಡುಪಿಗೆ ತಂದು ಕೃಷ್ಣನ ಎದುರಿಗೆ ಸಂತೋಷದಿಂದ ಪ್ರತಿಷ್ಠಾಪಿಸಿದರು.

**ಶ್ಲೋಕ:– ವಾದಿರಾಜೇ ವಿದೇಶಸ್ಥೇ ಪರ್ಯಾಯೇಽನ್ಯೇ ಮಠೇಶ್ವರಾಃ ॥53॥**
**ಅನಂತಾಸನದೇವಸ್ಯ ಸವಿಧೇ ಮಧ್ವಯೋಗಿನಮ್ ।**
**ಅರ್ಚಿತುಂ ಹ್ಯಾಗತಾಸ್ತತ್ರ ಸ್ಥಾನಗೇನಾವರೋಧಿತಾಃ ॥54॥**

**ಅರ್ಥ:–** ಬೇರೆಯವರ ಪರ್ಯಾಯ ಕಾಲದಲ್ಲಿ ಶ್ರೀವಾದಿರಾಜರು ಪರಸ್ಥಳದಲ್ಲಿರುವಾಗ, ಮಠಾಧೀಶರುಗಳು ಅನಂತಾಸನದೇವರ ಸನ್ನಿಧಿಯಲ್ಲಿರುವ ಮಧ್ವಾಚಾರ್ಯರನ್ನು ಪೂಜಿಸಲು ಆಗಮಿಸಿದಾಗ ಅಲ್ಲಿರುವವರಿಂದ ತಡೆಯಲ್ಪಟ್ಟರು.

**ಶ್ಲೋಕ:– ಮಾರ್ಗೇಽಪ್ಯುಚ್ಛಿಷ್ಟ ವಿಕ್ಷೇಪಾದ್ ಬಾಧಿತಾಃ ಖಿನ್ನಮಾನಸಾಃ ।**
**ನ್ಯವೇದಯನ್ ವಾದಿರಾಜೇ ಕ್ಷಿಪ್ರಮಾಗಾತ್ಸ ಯೋಗಿರಾಟ್ ॥55॥**

**ಅರ್ಥ:–** ಅನಂತಾಸನದೇವಸ್ಥಾನಕ್ಕೆ ಹೋಗುವ ಮಾರ್ಗದಲ್ಲಿ ಎಂಜಲು ವಸ್ತುಗಳನ್ನು ಎಸೆದು ಪೀಡಿಸಲು, ಖಿನ್ನ ಮನಸ್ಕರಾದ ಮಠಾಧೀಶರು ವಾದಿರಾಜರಲ್ಲಿ (ಈ ವಿಷಯವನ್ನು) ವಿಜ್ಞಾಪಿಸಿದರು. ಆ ಯೋಗಿವರ್ಯರು ಕೂಡಲೇ ಉಡುಪಿಗೆ ಆಗಮಿಸಿದರು.

**ಶ್ಲೋಕ:– ಕೃಷ್ಣ ಗೇಹೋತ್ತರೇ ಭಾಗೇ ಶ್ರೀಮಧ್ವಂ ಯತಿಶೇಖರಮ್ ।**
**ಸ್ಥಾಪಯಾಮಾಸ ಮೇಧಾವೀ ನಿರ್ವಿಘ್ನಾರ್ಚನ ಸಿದ್ಧಯೇ ॥56॥**

**ಅರ್ಥ:–** ನಿರ್ವಿಘ್ನವಾಗಿ ಪೂಜೆಮಾಡುವುದಕ್ಕಾಗಿ ಕೃಷ್ಣದೇವರ ಗರ್ಭಗುಡಿಯ ಉತ್ತರ ಭಾಗದಲ್ಲಿ ಯತಿಶೇಖರರಾದ ಮಧ್ವಾಚಾರ್ಯರ ಪ್ರತಿಮೆಯನ್ನು ಮೇಧಾವಿಗಳಾದ ವಾದಿರಾಜರು ಸ್ಥಾಪಿಸಿದರು.

**ಶ್ಲೋಕ:– ಚೋರಾನ್‌ದ್ರುತಂ ಜಹೀತ್ಯೇಕಾಂ ಭಾಷಾಗೀತಿಂ ಚಕಾರ ಹಿ ।**
**ಯತ್ಪಾಠಾದ್ವಿಘ್ನಕರ್ತಾರಸ್ತೇ ಚೋರಾಃ ನಾಶಮಾಯಯುಃ ॥57॥**

**ಅರ್ಥ:–** "ಕೊಲ್ಲು ಬೇಗ ಕಳ್ಳರ" ಎನ್ನುವ (ಕನ್ನಡ) ಭಾಷೆಯ ಕೀರ್ತನೆಯನ್ನು ವಾದಿರಾಜರು ರಚಿಸಿದರು. ಅದರ ಪಠಣದಿಂದ (ಮಧ್ವಾಚಾರ್ಯರ) ಪೂಜೆಗೆ ವಿಘ್ನಪಡಿಸುತ್ತಿದ್ದ ಆ ಕಳ್ಳರು ನಾಶವಾದರು.

**ಶ್ಲೋಕ:– ಸೋದಾಕ್ಷೇತ್ರೇ ತಥಾ ಮಧ್ವಪ್ರತಿಮಾಂ ವಾದಿರಾಟ್ ಗುರುಃ ।**
**ಐಚ್ಛತ್ ಸ್ಥಾಪಯಿತುಂ ಶ್ರುತ್ವಾ ಪಾಜಕಸ್ಥ ಮಠೇಶಿತಾ ॥57॥**

**ಕಾಣ್ವಾಭಿದಕ್ಷೇತ್ರಗತ ಮಠಾಧಿಪತಿ ಯೋಗಿರಾಟ್।**
**ಪ್ರತಿಮಾಂ ತಾಂ ಪಾಜಕಾಖ್ಯೇಕ್ಷೇತ್ರೇ ಮಧ್ವಪದಾಗ್ರತಃ ॥ ॥59॥**
**ಸ್ಥಾಪಯಿತ್ವಾ ಸ್ವಭಕ್ತೇಷು ಪ್ರಸಾದಂ ಕರ್ತುಮರ್ಹಸಿ।**
**ಇತ್ಯರ್ಥಿತೋ ವಾದಿರಾಜಸ್ತಾಂ ಮಧ್ವಪ್ರತಿಮಾಂ ಶುಭಾಮ್ ॥60॥**
**ಪಾಜಕೇ ವಾಸುದೇವಾಂಘ್ರಿ ನಿಕಟೇ ನ್ಯದಧಾತ್ಕಿಲ ।**
**ಯಾಮಾರಾಧ್ಯ ಲಭಂತೇ ಸ್ಮ ಭುಕ್ತಿಂ ಮುಕ್ತಿಂ ಚ ಸೇವಕಾಃ ॥61॥**

**ಅರ್ಥ:–** ಹಾಗೆಯೇ, ವಾದಿರಾಜಗುರುಗಳು ಸೋದಾಕ್ಷೇತ್ರದಲ್ಲಿ (ತಮ್ಮ ಬಳಿಯಿದ್ದ ಇನ್ನೊಂದು) ಮಧ್ವಾಚಾರ್ಯರ ಪ್ರತಿಮೆಯನ್ನು ಸ್ಥಾಪಿಸಬೇಕೆಂದಿರುವವರೆಂದು ಕೇಳಿ ಪಾಜಕ ಕ್ಷೇತ್ರದಲ್ಲಿರುವ ಮಠದ ಒಡೆಯರಾದ ಕಾಣಿಯೂರು ಮಠಾಧೀಶ ಯೋಗಿವರ್ಯರು "ಆ ಮಧ್ವಾಚಾರ್ಯರ ಪ್ರತಿಮೆಯನ್ನು ಪಾಜಕಕ್ಷೇತ್ರದಲ್ಲಿ ಮಧ್ವಾಚಾರ್ಯರ ಪಾದಗಳ ಮುಂಭಾಗದಲ್ಲಿ ಸ್ಥಾಪಿಸಿ, ತಮ್ಮ ಭಕ್ತರಲ್ಲಿ ಅನುಗ್ರಹ ಮಾಡುವವರಾಗಬೇಕು" ಎಂಬುದಾಗಿ ಪ್ರಾರ್ಥಿಸಿದರು. ಯಾರನ್ನು ಪೂಜಿಸಿದರೆ ಭಕ್ತರು (ಇಹದಲ್ಲಿ) ಭಕ್ತಿಯನ್ನು ಹಾಗೂ (ಪರದಲ್ಲಿ) ಮುಕ್ತಿಯನ್ನು ಹೊಂದುವವರೋ ಅಂತಹ ಶುಭಕರವಾದ ಮಧ್ವಾಚಾರ್ಯರ ಪ್ರತಿಮೆಯನ್ನು ಪಾಜಕಕ್ಷೇತ್ರದಲ್ಲಿ ವಾಸುದೇವರ (ಮಧ್ವಾಚಾರ್ಯರು) ಪಾದದ ಸಮೀಪದಲ್ಲಿ ವಾದಿರಾಜರು ಸ್ಥಾಪಿಸಿದರು.

**ಟಿಪ್ಪಣಿ:–** ಈಗಿನ ಕಾಣಿಯೂರು ಸ್ಥಳಕ್ಕೆ ಹಿಂದೆ ಕಣ್ವಕ್ಷೇತ್ರವೆಂಬ ಹೆಸರಿತ್ತು.

**ಶ್ಲೋಕ:–** **ಪಂಡಿತಮ್ಮನ್ಯಕಾಃ ಕೇಚಿನ್ಮತ್ಸರಾದ್ವಾದಿರಾಜಕೇ ।**
**ಕೋಲಾಪುರೇ ವಟುಂ ಕಂಚಿತ್ ಸಂಗೋಪ್ಯಾऽऽಖ್ಯಾಪಯನ್ಪ್ರಥಾಮ್ ॥62॥**
**ಮಾರಿತೋ ವಾದಿರಾಜೇನ ವಟುರಿತ್ಯಪವಾದಕಮ್ ।**
**ಶ್ರುತ್ವಾ ಮೂಕಾಂಬಿಕೈ ವೈತಜ್ಜಾನಾತೀತಿ ಯತಿರ್ವದನ್ ॥63॥**
**ಸ್ವಸ್ಥ ಬುದ್ಧಿರಭೂತ್ ಕೃಷ್ಣ ಮಹೋತ್ಸವ ಸುಸಂಭ್ರಮೇ ।**
**ಸೈವ ದೇವೀ ವಟುಂ ತಂ ಹಿ ನಿರ್ಭರ್ತ್ಸ್ಯ ಗುರು ಸನ್ನಿಧಿಮ್ ॥64॥**
**ಪ್ರೇಷಯಾಮಾಸ ಕೃಪಯಾ ಹ್ಯೇಕಾಂತಿಕ ಜನಪ್ರಿಯಾ ।**

**ಅರ್ಥ:–** ವಾದಿರಾಜರಲ್ಲಿ ಮಾತ್ಸರ್ಯವುಳ್ಳ ಪಂಡಿತಮಾನಿಗಳು ಒಬ್ಬ ಬ್ರಹ್ಮಚಾರಿಯನ್ನು ಕೊಲ್ಲೂರಿನಲ್ಲಿ ಅಡಗಿಸಿಟ್ಟು ಆ ಬ್ರಹ್ಮಚಾರಿಯನ್ನು ವಾದಿರಾಜರು ಕೊಲ್ಲಿಸಿದ್ದಾರೆ. ಎಂದು ಸುದ್ದಿಯನ್ನು ಹಬ್ಬಿಸಿದರು ಈ ಅಪವಾದವನ್ನು ಕೇಳಿ "ಮೂಕಾಂಬಿಕೆಯು ಇದನ್ನು ತಿಳಿದಿದ್ದಾಳೆ" ಎಂದು ಯತಿವರ್ಯರು ಹೇಳಲು, ಏಕಾಂತಭಕ್ತಜನಪ್ರಿಯಳಾದ ಮೂಕಂಬಿಕಾದೇವಿಯೇ ಆ ವಟುವನ್ನು ಹೆದರಿಸಿ ಸ್ವಸ್ಥ ಚಿತ್ತರಾದ ಶ್ರೀ ವಾದಿರಾಜರು ಕೃಷ್ಣನ ಉತ್ಸವ ಸಂಭ್ರಮದಲ್ಲಿರಲು ಗುರುಗಳ ಸನ್ನಿಧಿಗೆ ಕೃಪೆಯಿಂದ ಕಳುಹಿಸಿದಳು.

**ಶ್ಲೋಕ:–** **ಧಾವನ್ನಾಗತ್ಯ ಶರಣಂ ವಟುರಾಪ್ತೋऽರಿ ಸಂಚಯನ್. ॥65॥**
**ಮಲಿನಾಸ್ಯಂ ಚಕಾರಾರಿ ದುಷ್ಕೃತ್ಯಂ ಗುರವೇऽಬ್ರವೀತ್**

**ಅರ್ಥ:–** ಆ ವಟುವು ಓಡುತ್ತಾ ಬಂದು ಶರಣಾಗತನಾಗಿ "ದೂಷಿತರಾದ ಶತ್ರುಗಳ ಗುಂಪು ಈ ದುಷ್ಕೃತ್ಯವನ್ನು ಮಾಡಿತು" ಎಂದು ಗುರುಗಳಿಗೆ ಹೇಳಿದನು.

**ಶ್ಲೋಕ:–** **ಉಂಡಾರುನಾಮಕಗ್ರಾಮೇ ವಸನ್ ಯತಿವರೋ ನಿಶಿ । ॥66॥**
**ಗ್ರಾಮೇಶರಾಮಕೃಷ್ಣಾಖ್ಯ ಪ್ರಭುಣಾ ಸ ಭಟೇನ ಹಿ**
**ರುದ್ಧಸ್ತದಗ್ರತೋ ಗಚ್ಛನ್ನ ದೃಷ್ಟೋ ಬಹಿರಾಗಮತ್ ॥67॥**

**ಅರ್ಥ:–** ಉಂಡಾರುಯೆಂಬ ಹೆಸರಿನ ಗ್ರಾಮದಲ್ಲಿ ಯತಿವರರು ವಾಸ ಮಾಡುತ್ತಿರಲು ಒಂದು ರಾತ್ರಿ ರಾಮಕೃಷ್ಣ ಎಂಬ ಹೆಸರಿನ ಗ್ರಾಮಾಧಿಪತಿ ಭಟರಿಂದ ಸಹಿತನಾಗಿ (ಮಠವನ್ನು ಮುತ್ತಿ ಯಾರೂ ಹೊರಗೆ ಹೋಗದಂತೆ) ತಡೆದನು. (ಯತಿವರರು) ಅವರ ಎದುರಿಗೇ ನಡೆದು ಹೊರಗೆ ಬಂದರೂ ಅವರಿಂದ ಕಾಣಲ್ಪಡಲಿಲ್ಲ.

**ಶ್ಲೋಕ:–** **ರುಂಧಂತೋ ದಶ್ಯವೋ ಹ್ಯಂಧಾ ಆಪ್ರಾತಃ ಪರಿತೋ ಮಠಮ್।**
**ಭೀತಾಃ ಪಲಾಯಿತಾಃ ಪ್ರಾತರ್ವಾದಿರಾಜ ತಪೋಬಲಾತ್ ॥68॥**

**ಅರ್ಥ:–** ವಾದಿರಾಜರ ತಪಸ್ಸಿನ ಪ್ರಭಾವದಿಂದ ಮಠವನ್ನು ಸುತ್ತಲೂ ಸುತ್ತುವರೆದಿದ್ದ ಕಳ್ಳರು ಪ್ರಾತಃ ಕಾಲದವರೆಗೂ ಅಂಧರಾಗಿದ್ದು ಬೆಳಗಾಗಲು ಭೀತರಾಗಿ ಪಲಾಯನ ಮಾಡಿದರು.

**ಶ್ಲೋಕ:–** **ಸ್ವರ್ಣಕಾರಶ್ಚಿಕೀರ್ಷನ್ ಶ್ರೀ ಹೇರಂಬ ಪ್ರತಿಮಾಂ ಶುಭಾಮ್ ।**
**ಪಂಚಲೋಹದ್ರವಂ ಸಿಂಚನ್ನಶ್ವಾಸ್ಯಾಕೃತಿಮೈಕ್ಷತ ॥69॥**

**ಅರ್ಥ:–** ಓರ್ವ ಸ್ವರ್ಣಕಾರನು ಒಳ್ಳೆಯ ಗಣಪತಿಯ ಪ್ರತಿಮೆಯನ್ನು ಮಾಡಲಪೇಕ್ಷಿಸಿ ಪಂಚಲೋಹದ ದ್ರವವನ್ನು (ಅಚ್ಚಿಗೆ) ಸುರಿಯಲು ಅದು ಹಯಗ್ರೀವ ಆಕೃತಿ ಆದುದನ್ನು ನೋಡಿದನು.

**ಶ್ಲೋಕ:–** **ಯತಮಾನೋಽನ್ಯಥಾಕರ್ತುಮಶಕ್ತಸ್ತದ್ವಿಧಾರಣೇ ।**
**ಟಂಕೇನ ತಾಡಯಶ್ಚಿತ್ರಮಭೇದ್ಯಾಂ ವಿಸ್ಮಿತೋ ನಿಶಿ ॥70॥**
**ಸ್ವಪ್ನೇ ವಿಪ್ರೇಣ ಮೂಢ ತ್ವಂ ಮಾ ಮುಧಾ ಭಿಂಧಿ ತಾಡನೈಃ ।**
**ದೇವತಾಸನ್ನಿಧಾನೇ ತಾಂ ಶ್ವೋ ದೇಹ್ಯರ್ಥಯತೇ ಮುದಾ ॥71॥**

**ಅರ್ಥ:–** ಪ್ರಯತ್ನ ಮಾಡಿದರೂ ಸರಿಪಡಿಸಲು ಅಶಕ್ತನಾದ ಸ್ವರ್ಣಕಾರನು ವಿಗ್ರಹವನ್ನು ಒಡೆಯಲು ಕಲ್ಲುಳಿಯಿಂದ ಹೊಡೆದರೂ ತುಂಡಾಗದಿರುವದನ್ನು ನೋಡಿ ವಿಸ್ಮಿತನಾದನು. ಅವನಿಗೆ ಸ್ವಪ್ನದಲ್ಲಿ ಒಬ್ಬ ಬ್ರಾಹ್ಮಣನು **"ಹೇಮೂಢನೇ!** ನೀನು ವ್ಯರ್ಥವಾಗಿ ಹೊಡೆದು ತುಂಡು ಮಾಡಬೇಡ. ದೇವತಾಸನ್ನಿಧಾನವಿರುವ ಈ ವಿಗ್ರಹವನ್ನು ಕೊಡು ಎಂದು ನಾಳೆ ಸಂತೋಷದಿಂದ (ಒಬ್ಬರು) ಕೇಳುತ್ತಾರೆ**"** ಎಂದು ಹೇಳಿದನು.

**ಶ್ಲೋಕ:–** **ಇತಿ ಸಂಚೋದಿತಃ ಪ್ರಾತರಾಗತಾಯ ತಪಸ್ವಿನೇ।**
**ಸ್ವಪ್ನಸೂಚಿತವೃತ್ತಾಯ ವಾದಿರಾಜಾಯ ತಾಂ ದದೌ ॥72॥**

**ಅರ್ಥ:–** ಈ ರೀತಿಯಾಗಿ ಸ್ವಪ್ನದಲ್ಲಿ ಬೋಧಿತನಾದ ಸ್ವರ್ಣಕಾರನು ಪ್ರಾತಃಕಾಲದಲ್ಲಿ ಆಗಮಿಸಿದ ಸ್ವಪ್ನದಲ್ಲಿ ಸೂಚಿತರಾದ ತಪಸ್ವಿಗಳಾದ ಶ್ರೀ ವಾದಿರಾಜರಿಗೆ ಆ ಹಯವದನ ಮೂರ್ತಿಯನ್ನು ಅರ್ಪಿಸಿದನು.

**ಶ್ಲೋಕ:–** **ಯತಿರಾಡಶ್ವವದನಂ ಸಾದರಂ ಪರಿಗೃಹ್ಯ ಸಃ ।**
**ಅಧಿವಾಸಾಭಿಷೇಕಾದಿವಿದಿಭಿಃ ಪರಿಶೋಧ್ಯ ತಾಮ್ ॥73॥**
**ಪೂಜಯನ್ ಸ್ವರ್ಣಕಾರಂ ತಂ ಸಾನುಗಂ ಶಿಷ್ಯಮಾತನೋತ್ ।**
**ತತಃ ಸ್ವರ್ಣಕೃತಾಂ ವರ್ಗಸ್ತನ್ಮಠಚ್ಛಾತ್ರತಾಮಗಾತ್ ॥74॥**

**ಅರ್ಥ:–** ಶ್ರೀವಾದಿರಾಜಯತಿಗಳು ಆ ಹಯವದನನ್ನು ಭಕ್ತಿಪೂರ್ವಕ ಸ್ವೀಕರಿಸಿ ಆ ಮೂರ್ತಿಗೆ ಅಧಿವಾಸ ಅಭೀಷೇಕಾದಿಗಳಿಂದ ಶುದ್ಧಿಗೊಳಿಸಿ ಪೂಜಿಸಿದರು. ತಮ್ಮನ್ನು ಹಿಂಬಾಲಿಸಿದ ಆಸ್ವರ್ಣಕಾರನನ್ನು ಶಿಷ್ಯನನ್ನಾಗಿ ಸ್ವೀಕರಿಸಿದರು. ಅನಂತರ ಸ್ವರ್ಣಕಾರವರ್ಗದವರು ಮಠದ ಶಿಷ್ಯರಾದರು.

**ಶ್ಲೋಕ:–** **ತದನು ಹಯಮುಖಂ ತು ಕೋಲಮಪ್ಯಾದೃತಾತ್ಮಾ**
**ಮಣಿಕನಕ ಮನೋಜ್ಞೇ ವಿಷ್ಟರೇ ಭಕ್ತಿನಮ್ರಃ ।**
**ವಿವಿಧರುಚಿರಭಕ್ಷ್ಯೈರ್ಹಂತ ರಾಜೋಪಚಾರೈಃ**
**ನಿರತಮವನಿಪೂಜ್ಯಃ ಪೂಜಯನ್ ರಾಜತೇ ಸ್ಮ ॥75॥**

**ಅರ್ಥ:–** ಅನಂತರ ಆ ಹಯಗ್ರೀವದೇವರನ್ನೂ ಹಾಗೂ ತಮ್ಮ ಪಟ್ಟದ ವರಾಹ ದೇವರನ್ನೂ ಮನೋಹರವಾದ ಮಣಿಗಳಿಂದ ಖಚಿತ ಸುವರ್ಣಪೀಠದಲ್ಲಿಟ್ಟು ರುಚಿಕರವಾದ ವಿವಿಧ ಭಕ್ಷ್ಯಗಳಿಂದಲೂ, ರಾಜೋಪಚಾರಗಳಿಂದಲೂ ಭಕ್ತಿ ನಮ್ರರಾಗಿ ಪೂಜಿಸುತ್ತಾ ಆದರಲ್ಲೇ ಆಸಕ್ತರಾಗಿ ವಾದಿರಾಜರು ಶೋಭಿಸಿದರು.

**ಶ್ಲೋಕ:–** **ಇತಿ ಶ್ರೀವೇದನಿಧಿತೀರ್ಥಾಂತೇವಾಸಿ ರಾಮಚಂದ್ರಾಚಾರ್ಯವಿರಚಿತೇ**
**ಶ್ರೀ ವಾದಿರಾಜಗುರುವರಚರಿತಾಮೃತೇ ಚತುರ್ಥಬಿಂದುಃ ಸಮಾಪ್ತಃ**

**ಅರ್ಥ:–** ಇಲ್ಲಿಗೆ ಶ್ರೀ ವೇದನಿಧಿತೀರ್ಥರ ವಿದ್ಯಾಶಿಷ್ಯರಾದ ರಾಮಚಂದ್ರಾಚಾರ್ಯರಿಂದ ರಚಿತವಾದ ಶ್ರೀ ವಾದಿರಾಜಗುರುವರ ಚರಿತಾಮೃತದಲ್ಲಿ ನಾಲ್ಕನೇಯ ಬಿಂದು: ಮುಗಿಯಿತು.

## ॥ ಪಂಚಮ ಬಿಂದುಃ ॥

**ಶ್ಲೋಕ:–** **ಇಂದ್ರಪ್ರಸ್ಥೇಶಯವನಭೂಪೇನ ಪ್ರೇಷಿತೈಃ ಪುನಃ ।**
**ಸುವರ್ಣೈಃ ಕೃಷ್ಣಮಠಗವಲಭ್ಯಾ ಚ್ಛಾದನಾಯ ಸಃ ॥1॥**
**ಇಚ್ಛನ್ ಸ್ವಪ್ನೇ ನಿಷಿದ್ಧಃ ಸನ್ ಮಠೋದೀಚ್ಯಾಮಿಲಾತಲೇ ।**
**ತಾನಿ ಭರ್ಮಾಣಿ ಸಂಸ್ಥಾಪ್ಯ ತದೂರ್ಧ್ವಂ ಸರ್ಪಮೂರ್ತಿಕಾಮ್ ॥2॥**
**ಸ್ಥಾಪಯಾಮಾಸ ನಾಗಸ್ತು ತತ್ರದ್ಯಾಪಿ ಸುಪೂಜ್ಯತೇ !**
**ಅನ್ಯಚ್ಚ ಕಾರಣಂ ನಾಗಸ್ಥಾಪನೇ ಶ್ರುತಮತ್ರ ಹಿ ॥3॥**

**ಅರ್ಥ:–** ಇಂದ್ರಪ್ರಸ್ಥದ (ದೆಹಲಿ) ಅರಸನಾದ ಯವನರಾಜನಿಂದ ಪುನಃ ಕಳುಹಿಸಲ್ಪಟ್ಟ ಚಿನ್ನದಿಂದ ಕೃಷ್ಣಮಠದ ತೊಲೆಗಳನ್ನು ಆಚ್ಛಾದಿಸಬೇಕೆಂಬ ಅಪೇಕ್ಷೆಯುಳ್ಳ ವಾದಿರಾಜರಿಗೆ ಬೇಡವೆಂದು ಸ್ವಪ್ನದಲ್ಲಿ ಸೂಚನೆಯಾಗಲು ಮಠದ ಪೂರ್ವದಿಕ್ಕಿನ ಭೂಮಿಯಲ್ಲಿ ಆ ಚಿನ್ನವನ್ನು ಹುಗಿಸಿ ಅದರ ಮೇಲ್ಭಾಗದಲ್ಲಿ ಸರ್ಪಮೂರ್ತಿಯನ್ನು ವಾದಿರಾಜರು ಪ್ರತಿಷ್ಠಾಪನೆ ಮಾಡಿದರು. ಆ ನಾಗನು ಆ ಸ್ಥಳದಲ್ಲಿ ಇಂದಿಗೂ ಪೂಜಿಸಲ್ಪಡುತ್ತಿರುವನು. ನಾಗಸ್ಥಾಪನೆಗೆ ಬೇರೊಂದು ಕಾರಣವೂ ಶ್ರುತವಾಗಿದೆ.

**ಶ್ಲೋಕ:–** **ಕರ್ಕೋಟಕಸ್ಯ ಗೋಕರ್ಣೇ ಪಾತಾಲಬಿಲ ಮಾದೃತಮ್ ।**
**ಸುಬ್ರಮಣ್ಯೇ ವಾಸುಕೇಸ್ತು ಬಿಲಂ ಖ್ಯಾತಮಿಲಾತಲೇ ॥4॥**
**ರೂಪ್ಯಪೀಠೇ ತಕ್ಷಕಸ್ಯ ಬಿಲಂ ಪ್ರಥಿತಮಸ್ತಿ ಹಿ**

**ಅರ್ಥ:–** ಕಾರ್ಕೋಟಕನಿಗೆ ಪಾತಾಳ(ಕ್ಕೆ ಹೋಗುವ) ಬಿಲವು ಗೋಕರ್ಣದಲ್ಲಿಯೂ, ವಾಸುಕಿಯ ಬಿಲವು ಸುಬ್ರಮಣ್ಯದಲ್ಲಿಯೂ, ತಕ್ಷಕನ ಬಿಲವು ಉಡುಪಿಯಲ್ಲಿಯೂ ಇದೆ ಎಂದು ಭೂಮಿಯಲ್ಲಿ ಪ್ರಸಿದ್ಧವಾಗಿದೆ.

**ಶ್ಲೋಕ:–** **ಕ್ವಚಿತ್ತಕ್ಷಕನಿಃಶ್ವಾಸತೈಕ್ಷ್ಣ್ಯೇನ ಬೃಶಬಾಧಿತಾಃ ॥5॥**
**ಪೌರಾಃ ಶ್ರೀ ವಾದಿರಾಜಾರ್ಯಂ ಪ್ರಾರ್ಥಯಾಮಾಸುರಾದರಾತ್ ।**
**ತತ್ಪೀಡಾ ಪರಿಹಾರಾರ್ಥಂ ಬಿಲಾಸ್ಯಮುಪಲೇನ ತತ್ ॥6॥**
**ಸಂಛಾದ್ಯೋಪರಿ ನಾಗಸ್ಯ ಮೂರ್ತಿಮಾಸ್ಥಾಪಯದ್ಗುರುಃ ।**

**ಅರ್ಥ:–** ಕೆಲವು ಜಾಗಗಳಲ್ಲಿ ತಕ್ಷಕನ ತೀಕ್ಷ್ಣತೆಯಿಂದ ಬಹಳವಾಗಿ ಪೀಡಿತರಾದ ಪೌರರು ಭಕ್ತಿಯಿಂದ ವಾದಿರಾಜರನ್ನು (ತಮ್ಮ ಕಷ್ಟವನ್ನು ಪರಿಹರಿಸುವಂತೆ) ಪ್ರಾರ್ಥಿಸಿದರು. ಅವರಿಗಿರುವ ತೊಂದರೆಯನ್ನು ಪರಿಹರಿಸುವುದಕ್ಕಾಗಿ ಬಿಲದ ಬಾಯಿಯನ್ನು ಶಿಲೆಯಿಂದ ಮುಚ್ಚಿಸಿ ಅದರ ಮೇಲೆ ನಾಗನ ಮೂರ್ತಿಯನ್ನೂ ಗುರುಗಳು ಸ್ಥಾಪಿಸಿದರು.

**ಶ್ಲೋಕ:–** **ಸ್ವರ್ಣರಕ್ಷಾಂ ಪೌರಪೀಡಾಹೃತಿಂ ನಾಗಪ್ರತಿಷ್ಠಯಾ ॥7॥**
**ಕಾರ್ಯದ್ವಯೀಂ ವಾದಿರಾಜಃ ಸಾಧಯಾಮಾಸ ಕೌಶಲಾತ್ ।**
**ತನ್ಮಹಿಮ್ನಾ ನಾಗರಾಜಃ ಪೂಜಿತಃ ಕಾಮದೋಽಸ್ತಿ ಹಿ ॥8॥**

**ಅರ್ಥ:–** ಸ್ವರ್ಣಸಂಪತ್ತನ್ನು ರಕ್ಷಿಸುವ ಹಾಗೂ ಪುರಜನರ ತೊಂದರೆಯನ್ನು ನಿವಾರಿಸುವ, ಎರಡು ಕಾರ್ಯಗಳನ್ನು ವಾದಿರಾಜರು ನಾಗಪ್ರತಿಷ್ಠೆ ಮಾಡುವ ಮೂಲಕ ಕುಶಲತೆಯಿಂದ ಸಾಧಿಸಿದರು, ಆ ಮಹಿಮೆಯಿಂದ ನಾಗರಾಜನು ಪೂಜಿಸಿದವರಿಗೆ ಅಭೀಷ್ಟಗಳನ್ನು ಕೊಡುವನು.

**ಶ್ಲೋಕ:–** **ಅವಶಿಷ್ಟ ಸ್ವರ್ಣಭಾರಂ ಸ್ವಮಠೇ ಭೂಗತಂ ತದಾ ।**
**ಕೃತ್ವೋಪರಿಷ್ಟಾತ್ತಸ್ಯಾಥ ಭೂತರಾಜಂ ನ್ಯಧಾನ್ಮುದಾ ॥9॥**

**ಅರ್ಥ:–** ವಾದಿರಾಜರು ಉಳಿದ ಚಿನ್ನವನ್ನು ತಮ್ಮ ಮಠದಲ್ಲಿ ಭೂಗತಮಾಡಿ ಅದರ ಮೇಲೆ ಭೂತರಾಜರನ್ನು ಸಂತೋಷದಿಂದ ಸ್ಥಾಪನೆ ಮಾಡಿದರು

**ಶ್ಲೋಕ:–** **ಮಿಥ್ಯಾವಾದಾಘತಪ್ತಾಸ್ತೇ ಕೋಟೀಶ್ವರಗ ಭೂಸುರಾಃ ।**
**ಆಗತಾಃ ಶರಣಂ ವಾದಿರಾಜಾರ್ಯೇಣ ಹಿ ಪಾವಿತಾಃ ॥10॥**
**ವಿಷ್ಣುದೀಕ್ಷಾಪ್ರದಾನೇನ ತಪ್ತಮುದ್ರಾಂಕನಾದಿನಾ**

**ಅರ್ಥ:–** ಮಾಯಾವಾದ ಮತದ ಪಾಪದಿಂದ ತಪ್ತರಾದ ಕೋಟೇಶ್ವರ (ಮಾಗಣೆಯ) ಬ್ರಾಹ್ಮಣರು ಶರಣು ಬರಲು, ಶ್ರೀ ವಾದಿರಾಜರು ತಪ್ತಮುದ್ರಾಧಾರಣೆಗಳಿಂದ ವಿಷ್ಣು ದೀಕ್ಷೆಯನ್ನಿತ್ತು ಅದರನ್ನು ಪವಿತ್ರಗೊಳಿಸಿದರು.

**ಟಿಪ್ಪಣಿ:–** ಈ ವಿಷಯದಲ್ಲಿ ಕೆಲವು ಗ್ರಂಥಗಳಲ್ಲಿ ಉಕ್ತವಾಗಿರುವ ಐತಿಹ್ಯವು ಕಾಲ್ಪನಿಕ ಕಥೆಯಾಗಿದೆ. ಗ್ರಾಮದ ಗಡಿಯ ವಿಷಯದಲ್ಲಿ ಜಗಳ ಬಂದಾಗ ಕೋಟೇಶ್ವರದವರು ಶ್ರೀ ವಾದಿರಾಜರಿಗೆ ಶರಣು ಹೋದಾಗ ವೈಷ್ಣವ ದೀಕ್ಷೆಯನ್ನಿತ್ತರೆಂದು ಉಕ್ತವಾಗಿದೆ. ಆದರೆ ಗಡಿ ವಿಚಾರದಲ್ಲಿನ ಜಗಳಕ್ಕೂ ವೈಷ್ಣವ ದೀಕ್ಷೆಗೂ ಸಂಬಂಧವಿಲ್ಲ. ಹಾಗೆಯೇ ಕೋಟೇಶ್ವರದ ಎಲ್ಲ ಜನರನ್ನೂ ವೈಷ್ಣವರನ್ನಾಗಿ ಮಾಡಲಿಲ್ಲ. ಕೇವಲ ಬ್ರಾಹ್ಮಣರಿಗೆ ವೈಷ್ಣವದೀಕ್ಷೆಯನ್ನು ಕೊಟ್ಟಿರುವರು. ಇದರಿಂದಾಗಿ ಪ್ರಚಲಿತ ಐತಿಹ್ಯವು ಕಾಲ್ಪನಿಕವಾಗಿದೆ. ಶ್ಲೋಕದಲ್ಲಿರುವ 'ಮಿಥ್ಯಾವಾದ' ಎನ್ನುವ ಪದಕ್ಕೆ ಮಾಯಾವಾದಮತದ ಅನುಸರಣೆಯೆಂದು ಅರ್ಥ ಮಾಡದಿರುವದೇ ಕಾರಣವಾಗಿದೆ. ಅಲ್ಲಿಯ ಬ್ರಾಹ್ಮಣರು ಮಾಯಾವಾದ ಮತಾವಲಂಬಿಗಳಾಗಿದ್ದರು. ತಮ್ಮ ದಿವ್ಯದೃಷ್ಟಿಯಿಂದ ಅವರೆಲ್ಲರೂ ಮುಕ್ತಿಯೋಗ್ಯ ಸಜ್ಜನರೆಂದು ತಿಳಿದ ವಾದಿರಾಜರು ಅವರಿಗೆ ವೈಷ್ಣವ ದೀಕ್ಷೆಯನ್ನಿತ್ತು ಉದ್ಧಾರ ಮಾಡಿದರು.

**ಶ್ಲೋಕ:–** **ಯಮಾವತಾರೀ ಕನಕದಾಸನಾಮಾಽಥ ಶೂದ್ರಜಃ ॥11॥**
**ಶ್ರೀ ಕೃಷ್ಣಮಾಭಜನ್ಗಾಯನ್ ರೂಪ್ಯಪೀಠೇಽವಸತ್ತದಾ**

**ಅರ್ಥ:–** ಶೂದ್ರಯೋನಿಯಲ್ಲಿ ಜನಿಸಿದ ಯವನ ಅವತಾರೂಪಿಯಾದ ಕನಕದಾಸನೆಂಬುವರು ಆಸಮಯದಲ್ಲಿ ಶ್ರೀಕೃಷ್ಣನನ್ನು ಕೀರ್ತನೆಗಳಿಂದ ಭಜಿಸುತ್ತಾ ಉಡುಪಿಯಲ್ಲಿ ವಾಸವಾಗಿದ್ದರು.

**ಶ್ಲೋಕ:–** **ತದ್ಯೋಗ್ಯತಾವಿದಾ ವಾದಿರಾಜಾಸಮ್ಮಾನಿತೋಽಪಿ ಸಃ ॥12॥**
**ಈರ್ಷ್ಯಾಲುಭಿರದತ್ತಾನ್ನಃ ಶ್ರೀಕೃಷ್ಣಂ ಶರಣಂ ಗತಃ ।**

**ಅರ್ಥ:–** ಕನಕದಾಸರ ಯೋಗ್ಯನೆಯನ್ನರಿತ ವಾದಿರಾಜರಿಂದ ಅವರು ಸನ್ಮಾನಿಸಲ್ಪಟ್ಟಗ್ಯೂ, ಹೊಟ್ಟೆ ಕಿಚ್ಚುಳ್ಳುವರಿಂದ ಊಟ ಹಾಕದಿರಲು ಕನಕದಾಸರು ಶ್ರೀ ಕೃಷ್ಣನಿಗೆ ಶರಣು ಹೊಂದಿದರು.

**ಶ್ಲೋಕ:–** **ಏಕೈಕಭೂಷಾದಾನೇನ ಕೃಷ್ಣೇನ ನಿಶಿ ಸತ್ಕೃತಃ ॥13॥**
**ನಿಕ್ಷಿಪ್ಯ ಭೂಷಾಂ ತತ್ರಾಪ್ತವಸ್ತುನಾ ವರ್ತಯನ್ನ ಭೂತ್ ।**

**ಅರ್ಥ:–** ರಾತ್ರಿ ಕಾಲದಲ್ಲಿ ಒಂದೊಂದು ಆಭರಣಗಳನ್ನು ದಾನ ಪಡೆದು, ಗೌರವಿಸಲ್ಪಟ್ಟ ಕನಕದಾಸರು, ಆಭರಣಗಳನ್ನು ಒತ್ತೆಯಿಟ್ಟು ಅದರಿಂದ ಪ್ರಾಪ್ತವಾದ ವಸ್ತುಗಳಿಂದ ಜೀವಿಸಿದರು.

**ಶ್ಲೋಕ:–** **ಭೂಷಾಧಿಕೃದ್ಭಿರೇಕೈಕ ಭೂಷಾಽದರ್ಶನದುಃಖಿತೈಃ ॥14॥**
**ಪ್ರಾರ್ಥಿತೋ ವಾದಿರಾಡ್ಯೋಗೀ ಕನಕಂ ವಣಿಜಂ ಚ ತಮ್ ।**
**ಪೃಷ್ಟವಾನ್ವಿದಿತೋದಂತೋ ದ್ರವ್ಯದಾನಾತ್ತಭೂಷಣಃ ॥15॥**
**ಮಠೀಯಾನ್ಭರ್ತ್ಸಯನ್ ತಸ್ಮೈ ದೇವಾರ್ಪಿತಮದಾಪಯತ್ ।**

**ಅರ್ಥ:–** ಶ್ರೀಕೃಷ್ಣನ ಒಂದೊಂದೆ ಆಭರಣಗಳು ಕಾಣದಂತಾಗಲು ದುಃಖಿತನಾದ ಅಧಿಕಾರಿಯಿಂದ ಪ್ರಾರ್ಥಿಸಲ್ಪಟ್ಟ ವಾದಿರಾಜಯೋಗಿಗಳು ಕನಕದಾಸರನ್ನು ಹಾಗೂ ವ್ಯಾಪಾರಿಯನ್ನು ಕರೆಯಿಸಿ (ಕನಕದಾಸರಿಗೆ ಊಟವನ್ನು ಹಾಕದಿದ್ದಕ್ಕಾಗಿ) ಮಠದವರನ್ನು ನಿಂದಿಸಿ ಕೃಷ್ಣನಿಗೆ ಅರ್ಪಿತವಾದ ನೈವೇದ್ಯವನ್ನು ಕೊಡಿಸಿದರು (ಮುಂದೆಯೂ ಕೊಡುವ ವ್ಯವಸ್ಥೆಯನ್ನು ಮಾಡಿದರು.)

**ಶ್ಲೋಕ:–** **ಕದಾಚಿದ್ಬಹಿರಾಯಾತಮನ್ನಮಂಡಂ ಪ್ರಗೃಹ್ಯಸಃ ॥16॥**
**ಕನಕಃ ಪಿಷ್ಟಭಕ್ಷ್ಯಂ ಚ ಕೃತ್ವಾ ಕೃಷ್ಣಾರ್ಪಿತಂ ವ್ಯಧಾತ್ ।**
**ವಾದಿರಾಡರ್ಪಯನ್ನನ್ನಂ ತದರ್ಪಿತಮಮನ್ಯತ ॥17॥**
**ಪುನಃ ಪಾಕಂ ಕಾರಯಿತ್ವಾ ಕೃಷ್ಣಪೂಜಾಂ ಸಮಾಪಯತ್ ।**

**ಅರ್ಥ:–** ಒಂದು ಸಲ (ಅಡುಗೆ ಮನೆಯಿಂದ) ಹೊರಗೆ ಬರುತ್ತಿದ್ದ ಅನ್ನದ ಗಂಜಿಯನ್ನು ಕನಕನು ಸಂಗ್ರಹಿಸಿ ಅದರೊಡನೆ ಹಿಟ್ಟಿನಿಂದ ಭಕ್ಷ್ಯವನ್ನು ಮಾಡಿ ಕೃಷ್ಣನಿಗೆ ಅರ್ಪಿಸಿದನು. ವಾದಿರಾಜರು ಅನ್ನವನ್ನು ಸಮರ್ಪಿಸುವಾಗ ಅದು ಮೊದಲೇ (ಕನಕನಿಂದ) ಅರ್ಪಿತವಾಗಿದೆಯೆಂದು ತಿಳಿದರು. ಪುನಃ ಅನ್ನವನ್ನು ಅಡುಗೆಯನ್ನು ಮಾಡಿಸಿ ಕೃಷ್ಣ ಪೂಜೆಯನ್ನು ಮುಗಿಸಿದರು.

**ಶ್ಲೋಕ:–** **ತತ್ಕಥಾಸ್ಮರಣಾರ್ಥಂಸಃ ಪಿಷ್ಟಭಕ್ಷಂಸಮಂಡಕಮ್ ॥18॥**
**ಕೃಷ್ಣಪ್ರೀತ್ಯೈ ಸಮರ್ಪ್ಯಂ ತನ್ನಿಯುಯೋಜ ಮುನೀಶ್ವರಃ ।**

**ಅರ್ಥ:–** ಈ ಘಟನೆಯ ಸ್ಮರಣಾರ್ಥವಾಗಿ ಗಂಜಿ ಸಹಿತ ಹಿಟ್ಟಿನ ಭಕ್ಷ (ಗಟ್ಟಿವಡೆ)ಯನ್ನು ಶ್ರೀಕೃಷ್ಣನ ಪ್ರೀತಿಗಾಗಿ ಸಮರ್ಪಿಸುವ ವ್ಯವಸ್ಥೆಯನ್ನು ಮುನಿಶ್ರೇಷ್ಠರಾದ ವಾದಿರಾಜರು ಮಾಡಿದರು.

**ಶ್ಲೋಕ:–** **ಅದ್ವೈತಪಂಡಿತಃ ಕಶ್ಚಿದ್ವಾದಾರ್ಥಂ ಪತ್ರಮಾಲಿಖತ್ ॥19॥**

**ಅರ್ಥ:–** ಅದ್ವೈತ ಪಂಡಿತನೊಬ್ಬನು (ವಾದಿರಾಜರೊಂದಿಗೆ) ವಾದ ಮಾಡಲು ಪತ್ರವನ್ನು ಬರೆದನು.

**ಶ್ಲೋಕ:–** **ಏತದ್ದಿನೇ ಸ್ಥಲೇ ತತ್ರ ವಾದೋ ನಿಶ್ಚಯತೋ ಭವೇತ್ ।**
**ಇತಿ ಪತ್ರಾರ್ಥಮಾಲೋಕ್ಯ ವಾದಿರಾಟ್ ತತ್ಸಲಂ ಗತಃ ॥20॥**

**ಅರ್ಥ:–** ಇಂತಹ ದಿನ ಇಂತಹ ಸ್ಥಳದಲ್ಲಿ ವಾದವು ನಿಶ್ಚಯಿಸಲ್ಪಡಲಿದೆ ಎನ್ನುವ ಪತ್ರಾರ್ಥವನ್ನು ತಿಳಿದು ವಾ ದಿರಾಜರು (ಆದಿನ ಆ ಸ್ಥಳಕ್ಕೆ ಹೋದರು)

**ಶ್ಲೋಕ:–** **ನಿಶ್ಚಿತೇ ವಾಸರೇ ನಾಹಮಾಗಂತುಂ ಪ್ರಭವಾಮ್ಯತಃ ।**
**ಇತಸ್ತೃತೀಯೇ ದಿವಸೇ ಸಮಾಗಂತೇತಿ ಸೂಚಿತಃ ॥21॥**

**ಅರ್ಥ:–** 'ನಿಶ್ಚಿತದಿನ ತನಗೆ ಬರಲು ಸಾಧ್ಯವಾಗುವುದಿಲ್ಲವಾದ್ದರಿಂದ ಇಂದಿನಿಂದ ಮೂರನೇ ದಿನ ಬರುವೆನು" ಎಂಬುದಾಗಿ (ಅದ್ವೈತ ಪಂಡಿತನು) ಸೂಚಿಸಿದನು.

**ಶ್ಲೋಕ:–** **ಪ್ರತೀಕ್ಷಮಾಣೋ ನಾಪಶ್ಯದ್ವಾದಿನಂ ವಾದಿರಾಣ್ಮುನಿಃ ।**
**ಸಾಮೀಪ್ಯಾತ್ಕೃಷ್ಣಪರ್ಯಾಯ ಪೂಜಾಯಾಃ ಗಮನೋದ್ಯತಃ ॥22॥**

**ಅರ್ಥ:–** ಕಾದು ನೋಡುತ್ತಿದ್ದರೂ ಅದ್ವೈತ ಪಂಡಿತನು ಬಾರದಿರಲು ಶ್ರೀಕೃಷ್ಣ ಪರ್ಯಾಯ ಪೂಜೆ ಸಮೀಪಿಸಿರುವುದರಿಂದ ವಾದಿರಾಜಮುನಿಗಳು ಉಡುಪಿಗೆ ಹೋಗಲು ಉದ್ಯುಕ್ತರಾದರು.

**ಶ್ಲೋಕ:–** **ಪಾಂಡುರಂಗ್ಯನ್ವಯೋದ್ಭೂತ ಮಾನಂದಾಖ್ಯಂ ಬುಧೋತ್ತಮಮ್ ।**
**ನ್ಯಯೂಯುಜತ್ತಜ್ಜಯಾಯ ದದೌ ಮಂತ್ರಾಕ್ಷತಾನ್ಗುರುಃ ॥23॥**

**ಅರ್ಥ:–** ಪಾಂಡುರಂಗಿ ವಂಶದಲ್ಲಿ ಹುಟ್ಟಿದ ಆನಂದನೆಂಬ ಹೆಸರಿನ ಪಂಡಿತನನ್ನು ವಾದಮಾಡಲು ನಿಯೋಜಿಸಿ, ಜಯಗೊಳಿಸಲು ಗುರುಗಳಾದ ವಾದಿರಾಜರು ಅವನಿಗೆ ಮಂತ್ರಾಕ್ಷತೆಯನ್ನು ಕೊಟ್ಟರು.

**ಶ್ಲೋಕ:–** **ತದಾಗಮನ ಪರ್ಯಂತಮತ್ರ ಸ್ಥಿತ್ವಾ ವಿಜಿತ್ಯ ತಮ್ ।**
**ರೂಪ್ಯಪೀಠಂ ಸಮಾಗಚ್ಛ ಕಾಮಿತಂ ಸೇತ್ಸ್ಯತೀತಿ ತಮ್ ॥24॥**

**ಅರ್ಥ:–** "ಅದ್ವೈತ ಪಂಡಿತನು ಬರುವವರೆಗೆ ಇಲ್ಲಿಯೇ ಇದ್ದು ಅವನನ್ನು (ವಾದದಲ್ಲಿ)ಗೆದ್ದು ಉಡುಪಿಗೆ ಬನ್ನಿರಿ, ನಿಮ್ಮ ಅಭೀಷ್ಟವನ್ನು ಪಡೆಯುವಿರಿ." (ಎಂಬುದಾಗಿ ವಾದಿರಾಜರು ಆನಂದಭಟ್ಟರಿಗೆ ಅಪ್ಪಣೆ ಕೊಡಿಸಿದರು)

**ಶ್ಲೋಕ:–** **ಆನಂದಭಟ್ಟಃ ಪಶ್ಚಾತ್ತಮಾಗತಂ ವಾದಿನಂ ಜಯನ್ ।**
**ತಸ್ಮಾದ್ವಾದಪರಾಭೂತಿಪತ್ರಂ ಪ್ರಾಪ್ಯ ಸಮಾಗತಃ ॥25॥**

**ಅರ್ಥ:–** (ವಾದಿರಾಜರು ಉಡುಪಿಗೆ ಹೋದ) ನಂತರ ಬಂದ ವಾದಿಯನ್ನು ಜಯಿಸಿ. ವಾದದಲ್ಲಿ ಪರಾಜಿತನಾದ ಅವನಿಂದ ಜಯಪತ್ರವನ್ನು ಪಡೆದು ಆನಂದಭಟ್ಟರು (ಉಡುಪಿಗೆ) ಆಗಮಿಸಿದರು.

**ಶ್ಲೋಕ:–** **ಕೃಷ್ಣಪರ್ಯಾಯಸಕ್ತ ಶ್ರೀ ವಾದಿರಾಜಾಯ ಪತ್ರಕಮ್ ।**
**ಅರ್ಪಯಾಮಾಸ ದಯಯಾ ಭವತಾಂ ವಿಜಿತೋ ಬಲೀ ॥26॥**
**ಇತ್ಯಾವೇದಯದಾನಂದಭಟ್ಟಃ ಸಂತಾನಕಾಂಕ್ಷಯಾ ।**
**ವಾದಿರಾಜಂ ಪ್ರಾರ್ಥಯನ್ಸಃ ಪುತ್ರಾವಾಪ್ತಿರ್ಭವೇದಿತಿ ॥27॥**
**ಗುರುರಾಜಾದ್ವರಂ ಪ್ರಾಪ್ಯ ತುಷ್ಟಃ ಸ್ವಗೃಹಮಾಯಯೌ**

**ಅರ್ಥ:–** ಕೃಷ್ಣಪರ್ಯಾಯದಲ್ಲಿ ನಿರತರಾದ ಶ್ರೀ ವಾದಿರಾಜರಿಗೆ ಜಯಪತ್ರವನ್ನು ಅರ್ಪಿಸಿದರು. "ತಮ್ಮ ದಯೆಯಿಂದ ಬಲಿಷ್ಠನಾದ ವಾದಿಯನ್ನು ಗೆಲ್ಲಲು ಸಾಧ್ಯವಾಯಿತು." ಎಂಬುದಾಗಿ ಆನಂದಭಟ್ಟರು ಹೇಳಿದರು. ಅವರು ಸಂತಾನಾಕಾಂಕ್ಷೆಯಿಂದ ವಾದಿರಾಜರನ್ನು ಪ್ರಾರ್ಥಿಸಲು, "ಪುತ್ರರನ್ನು ಪಡೆಯುವಿರಿ" ಎಂಬುದಾಗಿ ಗುರುರಾಜರಿಂದ ವರವನ್ನು ಪಡೆದು ಸಂತೋಷದಿಂದ ತಮ್ಮ ಮನೆಗೆ ಹೋದರು

**ಶ್ಲೋಕ:–** **ಗುರೂತ್ತಮಾನುಗ್ರಹೇಣ ಪುತ್ರಂ ಪ್ರಾಪ್ಯ ಕೃತೀ ಮುದಾ ॥28॥**
**ಗುರುರಾಜಾಭಿದಾನಂ ತಂ ಚಕಾರಾನಂದ ಭಟ್ಟಕಃ ।**
**ಪಿತ್ರೋರಾನಂದದಾಯೀ ಸ ವವೃಧೇ ಶುಕ್ಲ ಚಂದ್ರವತ್ ॥29॥**

**ಅರ್ಥ:–** ಉತ್ತಮಗುರುಗಳಾದ ವಾದಿರಾಜರ ಅನುಗ್ರಹದಿಂದ ಪುತ್ರನನ್ನು ಪಡೆದು ಅದೃಷ್ಟವಂತರಾದ ಆನಂದಭಟ್ಟರು ಸಂತೋಷದಿಂದ ಆ ಮಗುವಿಗೆ ಗುರುರಾಜನೆಂದು ನಾಮಕರಣ ಮಾಡಿದರು. ತಂದೆಗೆ ಆನಂದಪ್ರದನಾದ ಆ ಬಾಲಕನು ಶುಕ್ಲ ಪಕ್ಷದ ಚಂದ್ರನಂತೆ ಬೆಳೆದನು.

**ಟಿಪ್ಪಣಿ:–** (ಆ ಬಾಲಕನಿಗೆ ನರಸಿಂಹಾಚಾರ್ಯರೆಂಬ ಇನ್ನೊಂದು ಹೆಸರಿತ್ತು) ಇವರೇ ಮುಂದೆ 1541ನೇ ಇಸ್ವಿಯಲ್ಲಿ ಶ್ರೀಉತ್ತರಾದಿ ಮಠದ 16ನೇ ಯತಿಗಳಾಗಿ ಪಟ್ಟವೇರಿ ವಿದ್ಯಾಧೀಶರೆಂದು ಪ್ರಖ್ಯಾತರಾಗಿದ್ದಾರೆ.

**ಶ್ಲೋಕ:–** **ವಾದಿರಾಜಃ ಸ್ವೀಯಡೋಲಾಂ ಭೂತರಾಜೋದ್ಧೃತಾಂ ಪುರಃ ।**
**ಭಕ್ತೋದ್ಧೃತಾಂ ಪೃಷ್ಠಭಾಗೇ ಸಮಾರುಹ್ಯ ಯದಾ ವ್ರಜೇತ್ ॥30॥**

**ಅರ್ಥ:–** ವಾದಿರಾಜರು ಯಾವಾಗ ಪಲ್ಲಕ್ಕಿಯನ್ನೇರಿ ಹೊರಡುತ್ತಿದ್ದರೋ (ಪಲ್ಲಕ್ಕಿಯ) ಮುಂಭಾಗವನ್ನು ಭೂತರಾಜರು ಹೊರುತ್ತಿದ್ದರು. ಹಿಂಭಾಗವನ್ನು ಭಕ್ತರು ಹೊರುತ್ತಿದ್ದರು.

**ಶ್ಲೋಕ:–** **ಜನಃ ಪುರೋ ನರೈಃ ಶೂನ್ಯಂ ವಿಲೋಕ್ಯಾऽಽಶ್ಚರ್ಯ ಮಾದದೌ ।**
**ಅಥ ಯಾನಾಗಮೊತ್ಥೇನ ವಾದಿರಾಡ್ ಯಶಸಾ ಯತಿಃ ॥31॥**
**ಈರ್ಷಯಾऽನ್ಯೋ ಮಂತ್ರಸಿದ್ಧ್ಯಾ ಭೂತೈರ್ಯಾನಮಧಾರಯತ್ ।**

**ಅರ್ಥ:–** ಪಲ್ಲಕ್ಕಿಯು (ಮುಂಭಾಗದಲ್ಲಿ ಹೊರುವವರಿಲ್ಲದೆ) ಹೋಗುವ ರೀತಿಯಿಂದ ಉಂಟಾದ ವಾದಿರಾಜರ ಕೀರ್ತಿಯನ್ನು ಸಹಿಸದ ಅನ್ಯಯತಿಯು ಮಂತ್ರಸಿದ್ಧಿ ಮೂಲಕ ಭೂತಗಳಿಂದ (ತನ್ನ) ಪಲ್ಲಕ್ಕಿಯನ್ನು ಹೊರಿಸಿದರು.

**ಶ್ಲೋಕ:–** **ವಾದಿರಾಜಸ್ಯ ಯಾನಾಗ್ರಂ ಭೂತರಾಜೋದ್ಧೃತಂ ಹಿ ಚೇತ್ ॥32॥**
**ಮಮ ಯಾನಸ್ಯ ಭಾಗೌದ್ವೌಧ್ರಿಯತೇ ಹಂತ ಭೂತಕೈಃ ।**
**ಇತ್ಯಾಘೋಷಿತ ಮಾಕರ್ಣ್ಯ ವಾದಿರಾಟ್ ಸ್ಫುಟಮೇಷ್ಯತಿ ॥33॥**
**ಅನ್ಯೋನ್ಯಮಿಲನೇ ತದ್ಧೀತ್ಯಾಹ್ಯಾಥ ಮಿಲನೇ ಕ್ವಚಿತ್ ।**
**ಭೂತರಾಜಂ ರುದ್ರರೂಪಂ ವೀಕ್ಷ್ಯ ಭೂತಾಃ ಪಲಾಯಿತಾಃ ॥34॥**
**ಯಾನಂ ತು ಭೂಮೌ ಪತಿತಂ ತದ್ಯೋಗಿಹ್ರೀಕರಂ ಹ್ಯಭೂತ್ ।**

**ಅರ್ಥ:–** "ವಾದಿರಾಜರ ಪಲ್ಲಕ್ಕಿಯ ಮುಂಭಾಗವು ಭೂತರಾಜರಿಂದ ಹೊರಲ್ಪಡುವುದಾದರೆ ನನ್ನ ಪಲ್ಲಕ್ಕಿಯ ಮುಂಭಾಗ ಹಿಂಭಾಗಗಳೆರಡೂ ಭೂತಗಳಿಂದ ಹೋರಲ್ಪಡುತ್ತದೆ." ಎಂದು (ಅನ್ಯಯತಿಯು) ಘೋಷಿಸುತ್ತಿದ್ದುದನ್ನು ಕೇಳಿ, ವಾದಿರಾಜರು "ಪರಸ್ಪರ ಎದುರು ಬದುರಾದಾಗ ಚೆನ್ನಾಗಿ ತಿಳಿಯುತ್ತದೆ" ಎಂದರು. ಒಂದು ಸ್ಥಳದಲ್ಲಿ (ಎರಡು ಪಲ್ಲಕ್ಕಿಗಳು) ಸಂಧಿಸಲು, ಭಯಂಕರರೂಪರಾದ ಭೂತರಾಜರನ್ನು ನೋಡಿ ಭೂತಗಳು ಪಲಾಯಾನ ಮಾಡಿದವು. ಪಲ್ಲಕ್ಕಿಯು ಭೂಮಿಯಲ್ಲಿ ಬಿದ್ದಿತು. ಯೋಗಿಗಳು ಲಜ್ಜಾಯುಕ್ತರಾದರು.

**ಶ್ಲೋಕ:–** **ಕದಾಚಿಲ್ಲಕ್ಷದೀಪಾಖ್ಯೇ ಮಹೇ ವೃಷ್ಟಿ ನಿರೋಧಿತೇ ॥ ॥35॥**
**ಯತಿಭಿಃ ಪ್ರಾರ್ಥಿತೋ ವಾದಿರಾಜೋ ವೃಷ್ಟಿಮಶಾಮಯತ್ ।**

**ಅರ್ಥ:–** ಒಂದು ಸಲ (ಉಡುಪಿಯ) ಲಕ್ಷದೀಪೋತ್ಸವವು ಮಳೆಯಿಂದ ನಿಂತು ಹೋಗುವಂತಾಗಲು (ಇತರ) ಯತಿಗಳಿಂದ ಪ್ರಾರ್ಥಿತರಾದ ವಾದಿರಾಜರು ಮಳೆಯನ್ನು ನಿಲ್ಲಿಸಿದರು.

**ಶ್ಲೋಕ:–** **ಸ್ವಯಂ ಸ್ಯಂದನರಜ್ಜುಂ ತಮಾಕರ್ಷನ್ ಗಾನ ತತ್ಪರಃ ॥36॥**
**ನಿರ್ವಿಘ್ನಂ ಕೃಷ್ಣದೇವಸ್ಯ ದೀಪೋತ್ಸವಮಕಾರಯತ್**
**ವೇಲೂರಕೇಶವಸ್ಯಾಪಿ ರಥಂ ರುದ್ಧಮಯಾಪಯತ್ ॥37॥**

**ಅರ್ಥ:–** ಪರಮಾತ್ಮನ ಕೀರ್ತನೆಯಲ್ಲಿ ನಿರತರಾಗಿ ವಾದಿರಾಜರು ಸ್ವತಃ ರಥದ ಹಗ್ಗವನ್ನು ಎಳೆಯುತ್ತಾ ಶ್ರೀ ಕೃಷ್ಣದೇವರ ಲಕ್ಷ ದೀಪೋತ್ಸವ ನಿರ್ವಿಘ್ನವಾಗಿ ನೆರವೇರಿಸಿ ಕೊಟ್ಟರು. ಚಲಿಸದೆ ನಿಂತಿದ್ದ ಬೇಲೂರು ಶ್ರೀ ಚನ್ನಕೇಶವದೇವರ ರಥವನ್ನೂ ಸಹ ಚಲಿಸುವಂತೆ ಮಾಡಿದರು.

**ಟಿಪ್ಪಣಿ:–** ಬೇಗ ಬಾರೋ ಬೇಗ ಬಾರೋ ನೀಲಮೇಘವರ್ಣ । ಬೇಗ ಬಾರೋ ವೇಲಾಪುರ ಚನ್ನ ॥ ಎಂಬ ಪದ.

**ಶ್ಲೋಕ:–** **ಚತುಷ್ಷಷ್ಟಿಕಲಾಭಿಜ್ಞೋ ವಾದಿರಾಜ ಇತಿ ಪ್ರಥಾ ।**
**ವೃಥೇತಿ ಚರ್ಮಕಾರಸ್ಯ ರಟತಃ ಪುರತೋ ಯತಿಃ ॥38॥**
**ಛಿತ್ವಾ ಕೃಷ್ಣಾಜಿನಂ ಚರ್ಮಕಾರಕಾರ್ಯಕ್ರಮೇಣ ಹಿ ।**
**ಅಯಶ್ಶಲಾಕಾಂ ನಾಸಾಯಾ ಮೂಲೇ ಸ್ವಿನ್ನೇ ನಿಧಾಯ ತಾಮ್ ॥39॥**
**ಅಜಿನಂ ಛಿದ್ರಯಾಮಾಸ ವಿಸ್ಮಿತಶ್ಚರ್ಮಕೃನ್ನಮನ್ ।**
**ಕ್ಷಂತವ್ಯಮಾಗ ಇತ್ಯುಕ್ತ್ವಾ ಮಾನಿತೋಽಗಾದ್ಗೃಹಂ ಸ್ವಕಮ್ ॥40॥**

**ಅರ್ಥ:–** ವಾದಿರಾಜರು 64 ಕಲೆಗಳನ್ನು ತಿಳಿದವರು ಎನ್ನುವ ಪ್ರಖ್ಯಾತಿಯು ಸುಳ್ಳು ಎಂದು ಅರಚುತ್ತಿದ್ದ ಚಮ್ಮಾರನ ಎದುರಿನಲ್ಲಿ, ಯತಿಗಳಾದ ವಾದಿರಾಜರು ಕೃಷ್ಣಾಜಿನವನ್ನು ಹರಿದು, ಚಮ್ಮಾರನ ಕೆಲಸದಂತೆ, ಕಬ್ಬಿಣದ ಸೂಜಿಯನ್ನು ಮೂಗಿನ ಬುಡದಲ್ಲಿರುವ ಬೆವರಿನಲ್ಲಿ ಲೇಪಿಸಿ ಕೃಷ್ಣಾಜಿನದಲ್ಲಿ ರಂಧ್ರವನ್ನು ಮಾಡಿ (ಹೊಲಿದರು) (ಆ ಕಾರ್ಯಕೌಶಲ್ಯವನ್ನು ನೋಡಿ) ಚಮ್ಮಾರನು. ಆಶ್ಚರ್ಯಚಕಿತನಾಗಿ ಅವರನ್ನು ನಮಸ್ಕರಿಸುತ್ತಾ ತನ್ನನ್ನು ಕ್ಷಮಿಸಬೇಕೆಂದು ಹೇಳಿ, ಅವಮಾನಿತನಾಗಿ ತನ್ನ ಮನೆಗೆ ಹೋದನು.

**ಶ್ಲೋಕ:–** **ಯಲ್ಲೂರು ಗ್ರಾಮದೇವಸ್ಯ ಶಿವಸ್ಯಾರಾಧಕೈರ್ದ್ವಿಜೈಃ ।**
**ಪ್ರಾರ್ಥಿತೋ ವಾದಿರಾಟ್ ತುಷ್ಟಃ ಶ್ರೀ ನೃಸಿಂಹಶಿಲಾಂ ನ್ಯಧಾತ್ ॥41॥**

**ಅರ್ಥ:–** ಎಲ್ಲೂರು ಗ್ರಾಮದೇವತೆಯಾದ ಶಿವನನ್ನು ಆರಾಧಿಸುವ ಬ್ರಾಹ್ಮಣರಿಂದ ಪ್ರಾರ್ಥಿತರಾದ ವಾದಿರಾಜರು ಸಂತೃಪ್ತರಾಗಿ ಶ್ರೀ ನರಸಿಂಹಸಾಲಿಗ್ರಾಮವನ್ನು (ಶಿವನ ಮಸ್ತಕದ ಮೇಲೆ) ಸ್ಥಾಪಿಸಿದರು.

**ಶ್ಲೋಕ:–** **ಶಿವಾಂತರ್ಯಾಮಿನೃಹರೇಃ ಪೂಜಾ ಕಾರ್ಯೇತಿ ತತ್ರ ಹಿ ।**
**ನಿಯುಜ್ಯ ಶಿವಮಸ್ತೌಷೀತ್ ಪೂಜಕೋದ್ಧಾರಹೇತವೇ ॥42॥**
**ತತ್ರತ್ಯ ವೃಷಭೇಂದ್ರೇಣ ಪ್ರಾರ್ಥಿತೋಽಸ್ತೌಚ್ಛಿವದ್ವಜಮ್ ।**

**ಅರ್ಥ:–** ಪೂಜಕನ ಉದ್ಧಾರಕ್ಕಾಗಿ ಶಿವನ ಅಂತರ್ಯಾಮಿಯಾದ ನರಸಿಂಹ ಪೂಜೆಯನ್ನು ಮಾಡಬೇಕೆಂದು ಅಲ್ಲಿ ಆಜ್ಞೆ ಮಾಡಿ, ಶಿವನನ್ನು ಸ್ತುತಿಸಿದರು ಅಲ್ಲಿರುವ ನಂದೀಶ್ವರನಿಂದ ಪ್ರಾರ್ಥಿತರಾದ ವಾದಿರಾಜರು ಶಿವಧ್ವಜನಾದ ನಂದೀಶ್ವರನನ್ನು ಸ್ತುತಿಸಿದರು.

**ಶ್ಲೋಕ:–** **ಅರ್ಥಿತೋಽಥ ಜ್ವರೇಣಾಯಂ ತಂ ಪ್ರವೇಶ್ಯ ತನೌ ಗುರುಃ ।**
**ಅರ್ಚಾಕಾಲಂ ಪರಿತ್ಯಜ್ಯ ಮುಮೋಚಾಥ ಸ್ವಯಂ ಸುಧೀಃ ।**

**ಅರ್ಥ:–** (ದೇಹವನ್ನು ಪ್ರವೇಶಿಸಲು) ಪ್ರಾರ್ಥಿಸಿದ ಜ್ವರವು (ಜ್ವರಾಭಿಮಾನಿಯು) ಗುರುಗಳ ದೇಹದಲ್ಲಿ ಪೂಜಾಕಾಲವನ್ನು ಬಿಟ್ಟು (ಇತರ ಸಮಯದಲ್ಲಿ) ಪ್ರವೇಶಮಾಡಿರುತ್ತಿತ್ತು. (ಸ್ವಲ್ಪ ಕಾಲದ) ಅನಂತರ ಜ್ಞಾನಿಗಳಾದ ಗುರುಗಳು ತಾವೇ ಅದನ್ನು ಬಿಡುಗಡೆ ಮಾಡಿದರು.

**ಶ್ಲೋಕ:–** **ನಿಡಂಬೂರುಸ್ಥಲಾಧೀಶಂ ವಿನೀತಂ ಸೇವನೋತ್ಸುಕಮ್ ॥44॥**
**ಅನುಗೃಹ್ಯ ವರಾಹಾರ್ಚ್ಯಾಂ ಪ್ರದಾಯ ತ್ರಿಸ್ವರೂಪಕಮ್ ।**
**ಋಜುಮಾಲಂಕೃತಂ ತಂ ಸ್ಥಾಪಯಾಮಾಸ ಮಾರುತಿಮ್ ॥45॥**

**ಅರ್ಥ:–** ವಿಧೇಯರಾದ ಸೇವೆಯನ್ನು ಮಾಡಲು ಉತ್ಸುಕರಾದ ನಿಡಂಬೂರು ಸ್ಥಳಾಧಿಪತಿಯಾದ ಬಲ್ಲಾಳರನ್ನು ಅನುಗ್ರಹಿಸಿ (ಅವರಿಗೆ) ವರಾಹದೇವರ ವಿಗ್ರಹವನ್ನು ಕೊಟ್ಟು ಋಜುಗಳ ಪಂಕ್ತಿಯಲ್ಲಿ ಅಲಂಕೃತನಾದ, (ಹನುಮ, ಭೀಮ, ಮಧ್ವವೆಂಬ) ಮೂರು ರೂಪಗಳುಳ್ಳ ಮುಖ್ಯಪ್ರಾಣನನ್ನು ಅವರ ಸ್ಥಳದಲ್ಲಿ ಸ್ಥಾಪಿಸಿದರು.

**ಶ್ಲೋಕ:–** **ತತ್ಪಾರ್ಶ್ವೇ ಭೂತರಾಜಂ ಚ ಬಲ್ಲಾಲಾನುಗ್ರಹೋತ್ಸುಕಃ ।**
**ಕೆಮ್ಮುಂಡಲೌ ದ್ವಿಜಾಗ್ರ್ಯಾಯ ಲಕ್ಷ್ಮೀನಾರಾಯಣಂ ದದೌ ॥46॥**

**ಅರ್ಥ:–** ಬಲ್ಲಾಳರನ್ನು ಅನುಗ್ರಹಿಸಲು ಉತ್ಸುಕರಾದ ವಾದಿರಾಜರು ಮಾರುತಿ ಪ್ರತಿಮೆಯ ಪಕ್ಕದಲ್ಲಿ ಭೂತರಾಜರನ್ನು ಸ್ಥಾಪಿಸಿದರು. ಹಾಗೂ ಕೆಮ್ಮುಂಡಲುಯೆಂಬ ಗ್ರಾಮದಲ್ಲಿರುವ ಶ್ರೇಷ್ಠ ಬ್ರಾಹ್ಮಣನನ್ನು ಅನುಗ್ರಹಿಸಿ ಲಕ್ಷ್ಮೀನಾರಾಯಣ ಪ್ರತಿಮೆಯನ್ನು (ಅವರಿಗೆ) ಕೊಟ್ಟರು.

**ಶ್ಲೋಕ:–** **ಇತ್ಯಾದಿ ಭೂರಿಚರಿತೈರ್ಜನತಾಮುದಾರಃ**
**ಪ್ರೋದ್ಧೃತ್ಯ ಸಾಂದ್ರ ಕರುಣಃ ಶರಣಂ ಸತಾಂ ಹಿ ।**
**ಶ್ರೀವಾದಿರಾಜಯತಿರಾಡತುಲಪ್ರಭಾವಃ**
**ಶ್ರೀಮಧ್ವಸನ್ಮತಸುವೃದ್ಧಿಕರೋಬಭಾಸೇ ॥47॥**

**ಅರ್ಥ:–** (ಪ್ರಸಿದ್ಧವಾದ, ದಾನಿ, ತ್ಯಾಗಶೀಲ, ಘನತೆಹೊಂದಿದ ಔದಾರ್ಯವುಳ್ಳ) ಇವೇ ಮೊದಲಾದ ಮಹಿಮೆಗಳಿಂದ ಜನರ ವಿಷಯದಲ್ಲಿ ಔದಾರ್ಯವುಳ್ಳ; ಶರಣಾಗತರಾದ ಸಜ್ಜನರನ್ನು ಉದ್ಧರಿಸಿದ ಮಹಾ ಕರುಣಾಶಾಲಿಯಾದ, ಅತುಲ ಪ್ರಭಾವಯುಕ್ತರಾದ, ಮಧ್ವಸನ್ಮತದ ಅಭಿವೃದ್ಧಿಕರವಾದ ಶ್ರೀ ವಾದಿರಾಜಯತಿಗಳು ಶೋಭಿಸಿದರು.

**ಶ್ಲೋಕ:–** **ಇತಿ ಶ್ರೀ ವೇದನಿಧಿತೀರ್ಥಾಂತೇವಾಸಿ ರಾಮಚಂದ್ರಾರ್ಯವಿರಚಿತೇ**
**ಶ್ರೀ ವಾದಿರಾಜಗುರುವರಚರಿತಾಮೃತೇ ಪಂಚಮಬಿಂದುಃ ಸಮಾಪ್ತಃ ।**

**ಅರ್ಥ:–** ಇಲ್ಲಿಗೆ ಶ್ರೀ ವೇದನಿಧಿತೀರ್ಥರ ಶಿಷ್ಯರಾದ ರಾಮಚಂದ್ರಾಚಾರ್ಯರಿಂದ ರಚಿತವಾದ ಶ್ರೀ ವಾದಿರಾಜ ಗುರುವರ ಚರಿತಾಮೃತದಲ್ಲಿ ಐದನೆಯ ಬಿಂದುವು ಮುಗಿಯಿತು.

## ॥ ಷಷ್ಠ ಬಿಂದುಃ ॥

**ಶ್ಲೋಕ:–** **ಸೋದಾರಾಜ್ಯೇ ನೃಪಾಲಸ್ಯ ಲಿಂಗಾಯತಗುರುಸ್ತದಾ ।**
**ಇಂದ್ರಜಾಲಪ್ರವೀಣತ್ವಾದಭ್ರಚಾರೀ ಸ್ವಯಂ ತ್ವಹಮ್ ॥1॥**
**ಕೈಲಾಸಸ್ಥ ಶಿವೌ ವೀಕ್ಷ್ಯ ತದನುಗ್ರಹಭಾಗಿತಿ ।**
**ವಂಚಯನ್ನಂಚಿತಕೃತಿಃ ಶಿವಾದೇಶಾದ್ದ್ವಿಜೋತ್ಕರಾನ್ ॥2॥**
**ಲಿಂಗಾಯತಾನ್ಕರೋಮೀತಿ ನೃಪಸಾಹಾಯ್ಯತೋ ಬಲಾತ್ ।**
**ವಶೀಕರ್ತುಂ ದ್ವಿಜಾನ್ಪ್ರಾಹ ನ ವಶ್ಯಾನ್ ದಂತಿಪಾದತಃ ॥3॥**
**ಘಾತಯಿಷ್ಯೇಽಥವಾ ಶೂಲೇ ಕ್ಷೇಪಯೇ ಛಿನ್ನನಾಸಿಕಾನ್ ।**
**ಇತ್ಥಂ ವಿಪ್ರೈರ್ಭೀಷಿತೈರ್ದ್ರಾಕ್ ಪ್ರಾರ್ಥಿತೋ ಗುರುರಾಟ್ ತದಾ ॥4॥**
**ಸೋದಾಪುರಂ ಗತೋ ದೂರೇ ವನೇ ತಪಸಿ ತಸ್ಥಿವಾನ್ ।**
**ಶಾಲ್ಮಲೀಸರಿತಸ್ತೀರೇ ಪ್ರಥಿತಂ ಯತ್ತಪೋವನಮ್ ॥5॥**

**ಅರ್ಥ:–** ಆ ಕಾಲದಲ್ಲಿ ಸೋದಾರಾಜ್ಯದಲ್ಲಿದ್ದ ಅರಸನ ಲಿಂಗಾಯತಗುರುವು ಇಂದ್ರಜಾಲದಲ್ಲಿ ಪ್ರವೀಣನಾಗಿದ್ದರಿಂದ ಗಗನ ಸಂಚಾರಿಯಾಗಿದ್ದನು. ಸ್ವಯಂ ತಾನಾದರೋ ಕೈಲಾಸದಲ್ಲಿರುವ ಶಿವನನ್ನು ನೋಡಿ ಅವನ ಅನುಗ್ರಹಕ್ಕೆ ಭಾಗಿಯಾಗಿದ್ದೇನೆ. ಎಂದು ವಂಚಿಸುತ್ತಾ ಕೀಳು ಕಾರ್ಯವನ್ನು ಮಾಡುವ ಅವನು 'ಶಿವನ ಆಜ್ಞಾನುಸಾರವಾಗಿ ಬ್ರಾಹ್ಮಣರನ್ನು ಲಿಂಗಾಯತರನ್ನಾಗಿ ಮಾಡುತ್ತೇನೆಂದು (ಹೇಳುತ್ತಾ) ರಾಜನ ಸಹಾಯದಿಂದ ಬಲಾತ್ಕಾರವಾಗಿ ವಶಮಾಡಿಕೊಳ್ಳಲು ಬ್ರಾಹ್ಮಣರಿಗೆ ವಶವಾಗದವರನ್ನು ಆನೆಕಾಲಿನಿಂದ ತುಳಿಸುತ್ತೇನೆ ಅಥವಾ ಶೂಲಕ್ಕೆ ಹಾಕಿಸುತ್ತೇನೆ ಅಥವಾ ಮೂಗನ್ನು ಕತ್ತರಿಸುತ್ತೇನೆ' ಎಂದು ಹೇಳುತ್ತಿದ್ದನು. ಇದರಿಂದ ಭೀತರಾದ ಬ್ರಾಹ್ಮಣರಿಂದ ಪ್ರಾರ್ಥಿತರಾದ ವಾದಿರಾಜಗುರುಗಳು ಶೀಘ್ರವಾಗಿ ಸೋದಾಪುರಿಗೆ ಹೋಗಿ ಶಾಲ್ಮಲೀ ನದಿ ತೀರದಲ್ಲಿ ದೂರದಲ್ಲಿರುವ ಪ್ರಖ್ಯಾತವಾದ (ತಪೋ) ವನದಲ್ಲಿ ತಪಸ್ಸನಾಚರಿಸುತ್ತಾ ಇರುವವರಾದರು.

**ಶ್ಲೋಕ:–** **ತದಾಽರಿಭಿರ್ಜಿತೋ ಯುಧಿ ಪ್ರಧಾವಿತೋ ವನಂ ವಿಶನ್।**
**ತಪಸ್ವಿನಃ ಸುತೇಜಸಾ ಪ್ರತಪ್ತದೇಹ ಐಕ್ಷತ ॥6॥**
**ಸಮಂತತೋಽಥ ವಿಸ್ಮಿತಸ್ತಪಸ್ವಿನಂ ದದರ್ಶ ಸಃ ।**
**ಸುಭಕ್ತಿತಃ ಪ್ರಣಮ್ಯ ತಂ ಪ್ರಪಾಹಿ ಮಾಂ ಪರಾಜಿತಮ್ ॥7॥**

**ಅರ್ಥ:–** (ಸೋದಾಪುರಿರಾಜನು) ಯುದ್ಧದಲ್ಲಿ ವೈರಿಗಳಿಂದ ಪರಾಜಿತನಾಗಿ ಓಡುತ್ತಾ ತಪೋವನವನ್ನು ಪ್ರವೇಶಿಸಿ, ತಪಸ್ವಿಗಳಾದ ವಾದಿರಾಜರ ಅತಿಶಯವಾದ ತೇಜಸ್ಸಿನಿಂದ ಸುಡುತ್ತಿರುವ ಸ್ಥಳವನ್ನು ಸುತ್ತಲೂ ನೋಡಿದನು. ಆಶ್ಚರ್ಯಭರಿತನಾದ ಅವನು ತಪಸ್ವಿಗಳನ್ನು ನೋಡಿದನು ಅತಿಶಯವಾದ ಭಕ್ತಿಯಿಂದ ಅವರಿಗೆ ನಮಸ್ಕರಿಸಿ, ಪರಾಜಿತನಾದ ತನ್ನನ್ನು ರಕ್ಷಿಸಬೇಕೆಂದು (ಪ್ರಾರ್ಥಿಸಿದನು)

**ಶ್ಲೋಕ:–** **ಇತಿ ದೀನಂ ಪ್ರಾರ್ಥಯಂತಂ ಕೋಽಸಿ ಕಿಂ ಭಯಮಿತ್ಯಥ ।**
**ಪೃಚ್ಛತೇ ವಾದಿರಾಜಾಯ ಸ್ವನಾಮಾ ಽಽರ್ತಿಂ ಚ ಸೋಽಬ್ರವೀತ್ ॥8॥**

**ಅರ್ಥ:–** ಹೀಗೆ ದೀನನಾಗಿ ಪ್ರಾರ್ಥಿಸುತ್ತಿರುವ ರಾಜನನ್ನು ಕುರಿತು ನೀನು ಯಾರು? ನಿನಗೆ ಏನು ಭಯ? ಎಂದು ವಾದಿರಾಜರು ಕೇಳಿದರು. ಅವರಿಗೆ ತನ್ನ ಹೆಸರು ಮತ್ತು ತನ್ನ ಕಷ್ಟವನ್ನು ರಾಜನು ಹೇಳಿದನು.

**ಶ್ಲೋಕ:–** **ತದಾ ಗುರುವರಃ ಕ್ರೋಧಾದಪೈಹಿ ದ್ವಿಜಬಾಧಕ ।**
**ವಿಪ್ರದ್ರೋಹಾಜ್ಜಿತೋಽಸಿ ತ್ವಮರಿಭಿಃ ಸ್ವಗುರುಂ ವ್ರಜ ॥9॥**
**ವಂಚಕಂ ತ್ವಿತಿ ಸಂಪ್ರೋಕ್ತಃ ಶರಣಂ ಪಾಹಿ ಮಾಂ ಪ್ರಭೋ ।**
**ಆಗಸ್ಕೃತಮಪೀತ್ಯದ್ದಾ ಪಶ್ಚಾತ್ತಾಪಿನಮೂಚಿವಾನ್ ॥10॥**

**ಅರ್ಥ:–** ಆಗ ಗುರುವರ್ಯರು ಕ್ರೋಧದಿಂದ "ಹೇ ವಿಪ್ರಬಾಧಕನೇ ! (ಇಲ್ಲಿಂದ) ಹೋಗು. ವಿಪ್ರದ್ರೋಹದಿಂದ ನೀನು ಶತ್ರುಗಳಿಂದ ಪರಾಜಿತನಾಗಿರುವಿ. ನಿನ್ನ ವಂಚಕ ಗುರುವಿನ ಬಳಿಗೆ ಹೋಗು"ಎಂದರು.

ಹೀಗೆ ಹೇಳಿಸಿಕೊಳ್ಳಲ್ಪಟ್ಟ ರಾಜನು "ಪ್ರಭೋ! ಶರಣಾಗತನಾಗಿ ಬಂದಿರುವ, ಪಶ್ಚಾತ್ತಾಪವುಳ್ಳ ನನ್ನನ್ನು ಅಪರಾಧಿಯಾದಾಗ್ಯೂ ಕೂಡ ರಕ್ಷಿಸಿರಿ" ಎಂದು ಹೇಳಿದನು.

**ಶ್ಲೋಕ:–** **ಮಂತ್ರಾಕ್ಷತಾನ್ ಪ್ರದತ್ತಾಂಸ್ತ್ವಂ ಗೃಹೀತ್ವಾ ಸ್ವಪುರೀಂ ವಿಶ ।**
**ತದಾನೀಮೇವ ಶತ್ರುಸ್ತೇ ಸಗಣೋ ಧಾವತಿ ಧ್ರುವಮ್ ॥11॥**
**ರಾಜ್ಯಂ ತವ ವಶಂ ಯಾತಿ ತತಃ ಸಾಧಯ ಮದ್ವಚಃ ।**
**ಇತ್ಯುಕ್ತಃ ಪ್ರಣಿಪತ್ಯಾಶು ಸ್ವಪುರಂ ಗತವಾನ್ ನೃಪಃ ॥12॥**

**ಅರ್ಥ:–** "ನಿನಗೆ ಕೊಟ್ಟ ಮಂತ್ರಾಕ್ಷತೆಯನ್ನು ತೆಗೆದುಕೊಂಡು ನಿನ್ನ ಪಟ್ಟಣವನ್ನು ಪ್ರವೇಶಿಸು. ಆಕೂಡಲೇ ನಿನ್ನ ಶತ್ರುವು ಸೈನ್ಯ ಸಮೇತನಾಗಿ ನಿಶ್ಚಯವಾಗಿಯೂ ಓಡಿ ಹೋಗುವನು. ರಾಜ್ಯವು ನಿನ್ನ ವಶವಾಗುವುದು ಅನಂತರ ನನ್ನ ವಚನವನ್ನು ಪಾಲಿಸು" ಎಂದು ಹೇಳಲು ರಾಜನು ಕೂಡಲೇ (ಗುರುಗಳಿಗೆ) ನಮಸ್ಕರಿಸಿ. ತನ್ನ ಪಟ್ಟಣಕ್ಕೆ ಹೋದನು.

**ಶ್ಲೋಕ:–** **ತತ್ಪುರಸ್ತಾದ್ಧಯಾಃ ಶುಭ್ರಾಶ್ಚಕ್ರಶಂಖಾದಿಚಿನ್ಹಿತಾಃ ।**
**ಧಾಟಿಭಿಃಸ್ತೋಷಯಂತೋನ್ನೂನ್ ಭೀಷಯಂತೋಽರಿಸಂಹತಿಮ್॥13॥**

**ಅರ್ಥ:–** ರಾಜನ ಮುಂದೆ ಶಂಖ ಚಕ್ರಾದಿಗಳಿಂದ ಚಿಹ್ನಿತವಾದ ಶುಭ್ರವಾದ ಅಶ್ವಗಳು ರಾಜನಿಗೆ ಸಂತೋಷವನ್ನುಂಟು ಮಾಡುತ್ತಾ, ಶತ್ರು ಸಮೂಹಕ್ಕೆ ಹೆದರಿಕೆಯನ್ನುಂಟು ಮಾಡುತ್ತಾ ಶತ್ರುಗಳಿಗೆ ಎದುರಾಗಿ ಹೋದವು.

**ಶ್ಲೋಕ:–** **ಹಯಘಾತಿತಸೈನ್ಯೋಽರಿಃ ಪುರಂ ತ್ಯಕ್ತ್ವಾ ಪಲಾಯತ ।**
**ಸೋದಾರಾಜೋ ರಾಜತಾತನಾಯಕೋ ವಶಯನ್ ಪುರೀಮ್ ॥15॥**
**ಸ್ವರ್ಣದೋಲಾಂ ಸಮಾನೀಯ ವಾದಿರಾಜಾಂತಿಕಂ ಗತಃ ।**
**ಭಕ್ತ್ಯಾ ನತ್ವಾ ನಿವೇದ್ಯಾರಿವಿಜಯಂ ಗುರುಮಾನಯತ್ ॥15॥**

**ಅರ್ಥ:–** ಅಶ್ವಗಳಿಂದ ಪ್ರಹಾರವನ್ನು ಪಡೆದ ಶತ್ರುಸೈನ್ಯವು ಸೋದಾಪುರಿಯನ್ನು ತ್ಯಜಿಸಿ ಪಲಾಯನ ಮಾಡಿದವು. ಸೋದಾಪುರಿಯ ರಾಜನಾದ ಅರಸಪ್ಪ ನಾಯಕನು ಪಟ್ಟಣವನ್ನು ವಶಪಡಿಸಿಕೊಂಡು, ಚಿನ್ನದ ಪಲ್ಲಕ್ಕಿಯನ್ನು ತಗೆದುಕೊಂಡು ವಾದಿರಾಜರ ಬಳಿಗೆ ಹೋದನು. ಭಕ್ತಿಯಿಂದ ನಮಸ್ಕರಿಸಿ ಶತ್ರುವನ್ನು ಗೆದ್ದ ವಿಷಯವನ್ನು ತಿಳಿಸಿ, ಗುರುಗಳನ್ನು ಕರೆ ತಂದನು.

**ಶ್ಲೋಕ:–** **ಆಜ್ಞಾಪ್ಯತಾಂಮಯಾ ಕಾರ್ಯಂ ತ್ವದೀಯೋಽಸ್ಮ್ಯನುಗೃಹ್ಯತಾಮ್ ।**
**ಇತ್ಯರ್ಥಿತೋ ಯತಿಃ ಪ್ರಾಹ ವಿದ್ವಜ್ಜನಸಭಾಂ ಕುರು ॥16॥**
**ಗುರುಣಾ ತವ ವಾದೋಽಯಂ ಪ್ರಚಾಲ್ಯೋ ಮಮ ಸರ್ವಥಾ ।**
**ಇತ್ಯಾಜ್ಞಯಾ ತಥಾ ಕೃತ್ವಾ ಸಮಾಹ್ವಯತ ತಂ ಗುರುಮ್ ॥17॥**

**ಅರ್ಥ:–** "ನನ್ನಿಂದ ಆಗಬೇಕಾದ ಕಾರ್ಯವನ್ನು ಆಜ್ಞಾಪಿಸಿ, ನಿಮ್ಮವನೇ ಆಗಿದ್ದೇನೆ; ಅನುಗ್ರಹಿಸಬೇಕು." ಎಂದು ಪ್ರಾರ್ಥಿಸಲು, ಯತಿಗಳಾದ ವಾದಿರಾಜರು "ವಿದ್ವಜ್ಜನರ ಸಭೆಯನ್ನು ಸೇರಿಸು. ಎಲ್ಲ ರೀತಿಯಿಂದಲೂ ನಿನ್ನ ಗುರುವಿನೊಂ ದಿಗೆ ನನ್ನ ವಾದವು ನಡೆಯಬೇಕು." ಎಂದು ಹೇಳಿದರು. ಈ ಆಜ್ಞೆಯಂತೆ ಹಾಗೆ (ಅಂದರೆ ವಿದ್ವಜ್ಜನರಸಭೆಯನ್ನು) ಸೇರಿಸಿ ಆ ವೀರಶೈವ ಗುರುವನ್ನು ಆಹ್ವಾನಿಸಿದನು.

**ಶ್ಲೋಕ:–** **ಮಾಯಯಾಽಽಕಾಶಯಾನೋಽಸೌ ಗುರುಮಂತ್ರಪ್ರವಾದಿತಃ ।**
**ಪಪಾತ ಸದಸೋ ಮಧ್ಯೇ ಲಜ್ಜಾಭಯಸಮನ್ವಿತಃ ॥18॥**

**ಅರ್ಥ:–** ಆ ಗುರುವು ಮಾಯೆಯಿಂದ ಆಕಾಶದಲ್ಲಿ ಬರುತ್ತಿರಲು, ವಾದಿರಾಜ ಗುರುಗಳ ಮಂತ್ರೋಚ್ಚಾರಣೆಯಿಂದ ಸಭೆಯ ಮಧ್ಯದಲ್ಲಿ ಲಜ್ಜಾಭಯಗಳಿಂದ ಯುಕ್ತನಾಗಿ ಬಿದ್ದನು.

**ಶ್ಲೋಕ:–** **ಉತ್ಥಿತಸ್ಸ ಗುರುಃ ಪಶ್ಯನ್ನತಿತೇಜಸ್ವಿನಂ ಮುನಿಮ್ ।**
**ಭೀತಃ ಸ್ವಿನ್ನಃ ಸ್ವಕಾಪಟ್ಯಮದ್ಯ ಪ್ರಕಟಮೇಷ್ಯತಿ ॥19॥**
**ಇತಿ ಖಿನ್ನೋಽಪಿ ವಿಕೃತಿಮಾಚ್ಛಾದ್ಯಾಽಽಸನಮಾಭಜತ್ ।**

**ಅರ್ಥ:–** ಎದ್ದು ನಿಂತ ಆ ಗುರುವು ಅತಿ ತೇಜಸ್ವಿಯಾದ (ವಾದಿರಾಜ) ಮುನಿಗಳನ್ನು ನೋಡುತ್ತಾ ಹೆದರಿ ಬೆದರಿದನು. ತನ್ನ ಕಪಟವು ಈಗ ಬಯಲಾಗುವವದೆಂದು ದುಃಖಿತನಾದರೂ ಕೂಡ, ವಿಕಾರವನ್ನು ಮುಚ್ಚಿಕೊಂಡು ಆಸನದ ಲ್ಲಿ ಕುಳಿತುಕೊಂಡನು.

**ಶ್ಲೋಕ:–** **ರಾಜಾಽಥ ಸಮಿತೌ ಪ್ರಾಹ ಮಹಾತ್ಮಾ ವಾದಮಿಚ್ಛತಿ ॥20॥**
**ಗುರುಣಾ ಮಮ ಸಾರ್ಧಂ ತದ್ವಾದಃ ಪ್ರಕ್ರಮ್ಯತಾಮತಃ ।**
**ಯತೀಶ್ವರೋ ಬಭಾಷೇಽಥ ನೀತಿಜ್ಞನೃಪಶೇಖರ ॥21॥**

**ಅರ್ಥ:–** ಬಳಿಕ ನೀತಿಯನ್ನು ಬಲ್ಲ ಶ್ರೇಷ್ಠನಾದ ರಾಜನು ಸಭೆಯಲ್ಲಿ "ಮಹಾತ್ಮರಾದ (ವಾದಿರಾಜ) ಗುರುಗಳು ನನ್ನ ಗುರುವಿನೊಂದಿಗೆ ವಾದ ಮಾಡಲಿಚ್ಛಿಸುವರು ಆದ್ದರಿಂದ ಆ ವಾದವು ಪ್ರಾರಂಭವಾಗಲಿ" ಎಂದು ಹೇಳಿದನು. ಅನಂತರ ಯತಿ ಶ್ರೇಷ್ಠರಾದ ವಾದಿರಾಜರು ಹೇಳಿದರು.

**ಶ್ಲೋಕ:–** **ವಿದ್ವದ್ವರಾಃ ಶೃಣುಧ್ವಂ ಭೋಃ ನೃಪಸ್ಯ ಗುರುರೇಷ ಹಿ ।**
**ಬಾಧತೇ ಬ್ರಾಹ್ಮಣಾನ್ಮಾಯಾವಿದ್ಯಯಾ ವಂಚಯನ್ ಜನಾನ್ ॥22॥**

**ಅರ್ಥ:–** "ಶ್ರೇಷ್ಠರಾದ ವಿದ್ವಾಂಸರೇ ! ಕೇಳಿರಿ ರಾಜನ ಈ ಗುರುವು ಮಾಯ ವಿದ್ಯೆಯಿಂದ ಜನರನ್ನು ವಂಚಿಸುತ್ತಾ, ಬ್ರಾಹ್ಮಣರನ್ನು ಪೀಡಿಸುತ್ತಿದ್ದಾನೆ.

**ಶ್ಲೋಕ:–** **ಸಾಕ್ಷಾತ್ಕೃತಾಽದ್ಯ ಸಾ ಮಾಯಾ ಸಭ್ಯೈರತ್ರಾಗ್ರತೋ ಮಮ ।**
**ಅಧುನಾ ವಿಪ್ರಬಾಧಾ ತು ಪಾರ್ವತೀಶಸ್ಯ ಸಮ್ಮತಾ ॥23॥**
**ಭವೇನ್ನವೇತಿ ದ್ರಷ್ಟವ್ಯಂ ವಾದೇ ಜಯನಿಮಿತ್ತತಃ ।**

**ಅರ್ಥ:–** ಇಲ್ಲಿಗೆ ಬಂದ ಸಭೆಗೆ ಸಂಬಂಧಿಸಿದ (ಅಥವಾ ವಿಶ್ವಾಸಕ್ಕೆ ಅರ್ಹನಾದ ಅಥವಾ ಸಾಧು ಪುರುಷನಾದ) ನನ್ನಿಂದ ಈಗ ಆ ಮಾಯೆಯು ಪ್ರತ್ಯಕ್ಷವಾಗಿ ತೋರಿಸಲ್ಪಟ್ಟಿತು. ವಿಪ್ರರಿಗೆ ಕೊಡುತ್ತಿರುವ ಹಿಂಸೆಯು ಪಾರ್ವತಿ ಪತಿಗೆ ಸಮ್ಮತವಾದುದೋ ಅಲ್ಲವೋ ಎನ್ನುವದು ಈಗ ವಾದದಲ್ಲಿ ಜಯಗಳಿಸುವುದರ ಮೂಲಕ ಕಾಣಬೇಕು.

**ಶ್ಲೋಕ:– ಪ್ರಥಮೇ ಸಪ್ತಕೇಽಹ್ನಾಂ ತು ವಾದಃ ಕಾರ್ಯೋಽಹ್ಯನೇನ ಹಿ ॥24॥**
**ಉತ್ತರೇ ಸಪ್ತಕೇಽಹ್ನಾಂ ತು ಮಯಾತೂತ್ತರಮುಚ್ಯತೇ ।**
**ವಿಜಿತಶ್ಚೇದಸ್ಯ ಮತಂ ಪ್ರವೇಕ್ಷ್ಯಾಮ್ಯಹಮಾದರಾತ್ ॥25॥**

**ಅರ್ಥ:–** 'ಪ್ರಥಮ ಏಳುದಿನಗಳಕಾಲ ಅವನು ವಾದವನ್ನು ಮಾಡಬೇಕು. ನಂತರದ ಏಳುದಿನಗಳಲ್ಲಿ ನನ್ನಿಂದ ಉತ್ತರವು ಕೊಡಲ್ಪಡುತ್ತದೆ. ಅವನು (ವಾದದಲ್ಲಿ) ಗೆದ್ದರೆ ನಾನು ಅವನ ಮತವನ್ನು ಆದರದಿಂದ ಸ್ವೀಕರಿಸುತ್ತೇನೆ.'

**ಶ್ಲೋಕ:– ಪರಾಜಿತೋ ಯದಾಯಂ ಹಿ ಭವೇದ್ವೇಶ್ಯಾಂಘ್ರಿತಾಡಿತಃ ।**
**ಇತಿ ಕೃತ್ವಾ ಪಣಂ ತತ್ರ ಚತುರ್ದಶದಿನೇ ಮುನಿಃ ॥26॥**
**ಪರಾಜಿತ್ಯ ಗುರುಂ ತತ್ರ ವೇಶ್ಯಾಪದತಲಾಹತಮ್ ।**
**ಕಾರಯಾಮಾಸ ಸ ಗುರುರ್ಲಜ್ಜಯಾ ದುದ್ರುವೇ ದ್ರುತಮ್ ॥27॥**

**ಅರ್ಥ:–** ಈ ಮಾಯಾವಾದಿಯು ಪರಾಜಿತನಾದರೆ ವೇಶ್ಯಯರ ಪಾದದಿಂದ ಒದೆಯಲ್ಪಡುವನು ಈ ರೀತಿ ಪಣವನ್ನಿಟ್ಟು ವಾದದಲ್ಲಿ ಹದಿನಾಲ್ಕನೆಯದಿನ ವಾದಿರಾಜ ಮುನಿಗಳು ವೀರಶೈವಗುರುವನ್ನು ಸೋಲಿಸಿ ವೇಶ್ಯೆಯರಿಂದ ಒದೆಸಿದರು ಆ ಗುರುವು ಲಜ್ಜೆಯಿಂದ ಕೂಡಲೇ ಪಲಾಯನ ಮಾಡಿದನು.

**ಶ್ಲೋಕ:– ವೃಷಭಾಂಕಿತಘಂಟಾಂ ತಾಂ ತದೀಯಾಮಗ್ರಹೀದ್ಯತಿಃ ।**
**ತದ್ವಾದವಿಜಯಾಂಕಾಂ ಸ ರಾಜಾ ತುಷ್ಟಮನಾಸ್ತದಾ ॥28॥**

**ಅರ್ಥ:–** ಆಗ ಸಂತುಷ್ಟ ಮನಸ್ಕನಾದ ಆ ರಾಜನು ವಿಜಯದ ಸಂಕೇತವಾಗಿ ಆ ಗುರುವಿನ ಬಸವ ಮೂರ್ತಿಯುಕ್ತವಾದ ಘಂಟೆಯನ್ನು ಕೊಡಲು, ವಾದಿರಾಜ ಯತಿಗಳು ಸ್ವೀಕರಿಸಿದರು.

**ಶ್ಲೋಕ:– ಮುಕ್ತಾಸಿಂಹಾಸನಂ ಛತ್ರಚಾಮರೇ ಮುಕುಟಾದಿಕಮ್ ।**
**ಅಷ್ಟಾದಶನೃಪಾಂಕಂ ತಂ ಯತಯೇಽರ್ಪಿತವಾನ್ಮುದಾ ॥29॥**

**ಅರ್ಥ:–** (ಮುತ್ತಿನ) ಸಿಂಹಾಸನ ಛತ್ರ ಚಾಮರ ಹಾಗೂ ಕಿರೀಟಾದಿ (ಮುಕುಟಾದಿ) ಹದಿನೆಂಟು ರಾಜ ಚಿನ್ಹೆಗಳನ್ನು ಆ ರಾಜನು ಸಂತೋಷದಿಂದ ವಾದಿರಾಜ ಯತಿಗಳಿಗೆ ಅರ್ಪಿಸಿದನು.

**ಶ್ಲೋಕ:– ವೃಷಘಂಟಾಽಧುನಾಪ್ಯದ್ಧಾ ಪೂಜಾಯೈ ಗೃಹ್ಯತೇ ಮಠೇ ।**
**ರಾಜದತ್ತಾನ್ಯಮಾಲ್ಯಾನಿವಸ್ತೂನಿ ಸ್ವಮಠೇಽಧುನಾ ॥30॥**
**ದೃಶ್ಯಂತೇ ಸ್ತ್ರೀಪದಾಘಾತೋ ಹ್ಯಧುನಾಽಪಿ ಪ್ರಚಾಲ್ಯತೇ ।**
**ಶ್ರೀವಾದಿರಾಜಪೂಜ್ಯಶ್ರೀಪಾದಪುಣ್ಯದಿನೋತ್ಸವೇ ॥31॥**
**ಗೋಧೂಮಪಿಷ್ಟಮಾಹತ್ಯ ಪದ್ಭ್ಯಾಂ ಕ್ರೀಡಂತಿ ಸಸ್ತ್ರಿಯಃ ॥32॥**

**ಅರ್ಥ:–** ಈಗಲೂ ಮಠದಲ್ಲಿ ಪೂಜೆಗಾಗಿ ಬಸವ ಘಂಟೆಯು ಸ್ವೀಕರಿಸಲ್ಪಡುತ್ತಿದೆ. ರಾಜನಿಂದ ಅರ್ಪಿಸಲ್ಪಟ್ಟ ಅಮೂಲ್ಯವಸ್ತುಗಳನ್ನು ಈಗಲೂ ಮಠದಲ್ಲಿ ಕಾಣಬಹುದು. (ಲಿಂಗಾಯತ ಗುರುವಿಗೆ ಮಾಡಿಸಿದ ವೇಶ್ಯಾ) ಸ್ತ್ರೀ ಪಾದಾಘಾತವು ಈಗಲೂ ಶ್ರೀ ವಾದಿರಾಜ ಪೂಜ್ಯ ಶ್ರೀ ಪಾದರ ಆರಾಧನೆಯ ದಿನ ಪ್ರಚಲಿತವಾಗಿದೆ. ಸ್ತ್ರೀಯರು ಗೋಧಿ ಹಿಟ್ಟನ್ನು ಪಾದಗಳಿಂದ ಮರ್ದಿಸುವ (ಕುರುಹುವಿಗಾಗಿ ಒನಕೆಯಿಂದ ಕುಟ್ಟುತ್ತಾ) ಕ್ರೀಡಿಸುತ್ತಾರೆ.

**ಶ್ಲೋಕ:– ರಾಜ್ಞೋಽಸ್ಯ ಪುತ್ರೀ ಮೃತವಲ್ಲಭಾಽಗಾ**
**ದ್ಯತಿಂ ಶರಣ್ಯಂ ಶರಣಂ ವಿಷಣ್ಣಾ ।**
**ನಾರಾಯಣಾಷ್ಟೋತ್ತರಕೀರ್ತನೇನ**
**ತಂ ಜೀವಯನ್ ಭೂಪಸುತಾಮಮೋದಯತ್ ॥33॥**

**ಅರ್ಥ:–** ಆ ರಾಜನ ಪುತ್ರಿಯ ಪತಿಯು ಮೃತನಾಗಲು, ದುಃಖದಿಂದ ಯತಿಗಳಿಗೆ ಶರಣಾಗತಳಾಗಿ ಬಂದಳು ನಾರಾಯಣ ಅಷ್ಟೋತ್ತರ ಉಚ್ಚರಿಸುತ್ತಾ ಅವನನ್ನು ಬದುಕಿಸಿ, ರಾಜ ಪುತ್ರಿಯನ್ನು ಸಂತೋಷಪಡಿಸಿದರು.

**ಶ್ಲೋಕ:– ಸೋದಾರಾಜಃ ಶ್ರೇಷ್ಠ ದೇವಾಲಯಾರ್ಥಂ**
**ನತ್ವಾಸ್ತುತ್ವಾ ವಾದಿರಾಜಂ ಯಯಾಚೇ ।**

**ಯೋಗಿಶ್ರೇಷ್ಠೋ ಭೂತರಾಜಂ ತದರ್ಥಂ**
**ಪ್ರೋಚೇಗತ್ವಾ ವ್ಯಾಸಮಧ್ವೌ ಪ್ರಣಮ್ಯ ॥34॥**
**ಮಧ್ವಾದಿಷ್ಟಾಂ ಮೂರ್ತಿಮಾಶ್ವಾನಯೇಸ್ತ್ವಾ**
**ಮಿತ್ಯಾದಿಷ್ಟೋ ವ್ಯಾಸವಾಸಂ ಜಗಾಮ ।**
**ಯತ್ರ ವ್ಯಾಸೋ ಮಧ್ವಮುಖ್ಯೈರ್ಮುನೀಂದ್ರೈ**
**ರಾಸೇವ್ಯಾಂಘ್ರಿಸ್ತತ್ವವಾದೀ ವಿಭಾತಿ । ॥35॥**

**ಅರ್ಥ:–** ಸೋದಾಪುರಿಯ ರಾಜನು (ತನ್ನ ರಾಜ್ಯದಲ್ಲಿ! ಶ್ರೇಷ್ಠವಾದ ದೇವಾಲಯ ನಿರ್ಮಾಣಕ್ಕಾಗಿ ಶ್ರೀ ವಾದಿರಾಜಯತಿಗಳಿಗೆ ನಮಿಸಿ, ಅವರನ್ನು ಸ್ತುತಿಸಿ, ಪ್ರಾರ್ಥಿಸಿದನು. ದೇವಾಲಯಕ್ಕಾಗಿ ಶ್ರೇಷ್ಠ ಯೋಗಿಗಳಾದ ವಾದಿರಾಜರು ಭೂತರಾಜರಿಗೆ "ಬದರೀ ಕ್ಷೇತ್ರಕ್ಕೆ ಹೋಗಿ ವೇದವ್ಯಾಸ ಮತ್ತು ಮಧ್ವರಿಗೆ ನಮಸ್ಕರಿಸಿ, ಮಧ್ವರಿಂದ ಆದೇಶಿಸಲ್ಪಟ್ಟ ದೇವರ ಮೂರ್ತಿಯನ್ನು ಶೀಘ್ರವಾಗಿ ತನ್ನಿರಿ" ಎಂದು ಹೇಳಿದರು; ಈ ರೀತಿ ಆಜ್ಞಪ್ತರಾದ ಭೂತರಾಜರು ವೇದವ್ಯಾಸರಿಗೆ ವಾಸಸ್ಥಾನವಾದ (ಬದರೀ ಕ್ಷೇತ್ರಕ್ಕೆ) ಹೋದರು. ಅಲ್ಲಿ ಮಧ್ವರೇ ಮೊದಲಾದ ಮುನಿಶ್ರೇಷ್ಠರುಗಳಿಂದ ಸೇವಿತವಾದ ಪಾದಕಮಲಗಳವುಳ್ಳ, ತತ್ವವಾದಿಗಳಾದ ವೇದವ್ಯಾಸರು ಶೋಭಿಸುತ್ತಾರೆ.

**ಶ್ಲೋಕ:–** **ಸುಂದರಂ ಮಂದಿರಂ ದೇವಪ್ರತಿಷ್ಠಾಯೈ ನೃಪೋತ್ತಮಃ ।**
**ನಿದೇಶಾದ್ ವಾದಿರಾಜಸ್ಯ ಶಿಲಾಭಿಃ ಕರ್ತುಮುದ್ಯತಃ ॥36॥**

**ಅರ್ಥ:–** ದೇವರ ಪ್ರತಿಷ್ಠೆಗಾಗಿ ಸುಂದರವಾದ ಮಂದಿರ ನಿರ್ಮಾಣವಾಗಬೇಕೆಂದು ವಾದಿರಾಜರಿಂದ ಆದೇಶಿಸಲ್ಪಟ್ಟ ರಾಜನು ಶಿಲೆಗಳಿಂದ ಮಂದಿರವನ್ನು ಕಟ್ಟಲು ಪ್ರಾರಂಭಿಸಿದನು.

**ಶ್ಲೋಕ:–** **ನೃಪಾಜ್ಞಯಾಶ್ಮಕುಟ್ಟಕಸ್ತದೂರ್ಧ್ವಮಾನಯಚ್ಛಿಲಾಮ್ ।**
**ಅಧೋಮುಖಂ ಗತಾಂ ದ್ರುತಂ ಜನೋಪಮರ್ದಭೀತಿತಃ ॥37॥**
**ಗುರೋಃ ಪದಾಚ್ಛಪಾಮೀತಿ ಪ್ರೋಚೇ ತತ್ರನಸಾಽಪತತ್ ।**
**ತದಾಕರ್ಣ್ಯ ಸ್ವಯಂ ಯೋಗೀ ಹ್ಯಕ ಏವ ಶಿಲಾಂ ದೃಢಾಮ್ ॥38॥**
**ಬಹೂದ್ಧಾರ್ಯಾಮೂರ್ಧ್ವಭಾಗೇ ನಿಚಿಕ್ಷೇಪ ಮಹಾಬಲಃ ।**
**ಅಶ್ಮಕುಟ್ಟೈರಭೇದ್ಯಾಂ ಚ ಶಿಲಾಮಂಗುಷ್ಠತೋಽಭಿನತ್ ॥39॥**

**ಅರ್ಥ:–** ರಾಜನ ಆದೇಶದಂತೆ ದೇವಾಲಯ ನಿರ್ಮಿಸುತ್ತಿರುವ ಕಲ್ಲುಕುಟ್ಟಿಕನು (ದೊಡ್ಡ) ಶಿಲೆಯೊಂದನ್ನು ಮೇಲಕ್ಕೆ ತಂದನು ಅದು ಶೀಘ್ರವಾಗಿ ಕೆಳಗೆ ಬೀಳಲು ಪ್ರಾರಂಭಿಸಿತು. (ಕೆಳಗಿರುವ) ಜನರು ಹಿಂಸಿಸಲ್ಪಡುವರೆಂಬ ಭೀತಿಯಿಂದ. ಅವನು (ಬಿದ್ದರೆ) "ಗುರುಗಳ ಪಾದದಾಣೆ ಎಂದನು (ಆಗ) ಅದು ಅಲ್ಲಿ ಬೀಳಲಿಲ್ಲ. ಇದನ್ನು ಕೇಳಿದ ಮಹಾಬಲಿಷ್ಠರಾದ ಯೋಗಿವರರಾದ ವಾದಿರಾಜರು ತಾವು ಸ್ವತಃ ಒಬ್ಬರೇ ಬಹುತೂಕದ ಶಿಲೆಯನ್ನು ಎತ್ತಿ ಮೇಲು ಭಾಗದಲ್ಲಿಟ್ಟರು. ಹಾಗೂ ಕಲ್ಲುಕುಟ್ಟುಕರಿಂದ ಒಡೆಯಲಾಗದ ಶಿಲೆಯನ್ನು ತಮ್ಮ ಅಂಗುಷ್ಠದಿಂದ ತುಂಡು ಮಾಡಿದರು.

**ಶ್ಲೋಕ:–** **ಭೂತರಾಜಸ್ತಥಾ ದೇವಮಾನೇತುಂ ಬದರೀಂ ಗತಃ ॥**
**ಯತ್ರ ವ್ಯಾಸೋ ಮಧ್ವಮುಖ್ಯೈರ್ಯೋಗಿಭಿಃ ಪರ್ಯುಪಾಸ್ಯತೇ ॥40॥**

**ಅರ್ಥ:–** ಎಲ್ಲಿ ವೇದವ್ಯಾಸರು ಮಧ್ವರೇ ಮೊದಲಾದ ಯೋಗಿಗಳಿಂದ ಚೆನ್ನಾಗಿ ಸೇವಿಸಲ್ಪಡುತ್ತಾರೆಯೋ, ಅಂತಹ ಬದರೀಕಾಶ್ರಮಕ್ಕೆ ಭೂತರಾಜರು ದೇವರ ಮೂರ್ತಿಯನ್ನು ತರಲು ಹೋದರು.

**ಶ್ಲೋಕ:–** **ವ್ಯಾಸಂ ಮಧ್ವಂ ತಥಾ ನತ್ವಾ ವಿನೀತಃ ಸನ್ನ್ಯವೇದಯತ್ ।**
**ವಾದಿರಾಜೋಕ್ತಮಾಕರ್ಣ್ಯ ತ್ರಿವಿಕ್ರಮಮೃಜೂತ್ತಮೈಃ ॥41॥**

**ಅರ್ಥ:–** ವ್ಯಾಸರನ್ನು ಹಾಗೂ ಮಧ್ವರನ್ನು ನಮಸ್ಕರಿಸಿ, ವಿನೀತರಾಗಿ (ತಾವು ಬಂದ ಕಾರಣವನ್ನು) ತಿಳಿಸಿದರು. ವಾದಿರಾಜರು ಹೇಳಿ (ಕಳುಹಿಸಿ)ದ್ದನ್ನು ಕೇಳಿ, "ಉತ್ತಮ ಋಜುಗಳಿಂದ ತ್ರಿವಿಕ್ರಮನು ಪೂಜನೀಯನು (ತ್ರಿವಿಕ್ರಮ ಮೂರ್ತಿಯನ್ನು) ತೆಗೆದುಕೊಂಡು ಹೋಗಿ" ಎಂದು ಕರುಣಾನಿಧಿಗಳು ಆಜ್ಞಾಪಿಸಿದರು.

**ಶ್ಲೋಕ:–** **ಅರ್ಚನೀಯಂ ನಯೇತ್ಯಾಜ್ಞಾಮದಿಶತ್ಕರುಣಾನಿಧಿಃ ।**
**ತ್ರಿವಿಕ್ರಮಂ ಸಹರಥಮಾನಯನ್ರಕ್ಷಸಾ ಪಥಿ ॥42॥**
**ರುದ್ರಃ ಕ್ರುದ್ಧೋ ರಥಗತಚಕ್ರೀಣೈನಂ ನಿಹತ್ಯ ಹಿ ।**
**ಸುಮುಹೂರ್ತೇ ನಿಶ್ಚಿತೇಽಥ ಯತಯೇಽರ್ಪಿತವಾನ್ರಥಮ್ ॥43॥**

**ಅರ್ಥ:–** ರಥ ಸಹಿತ ತ್ರಿವಿಕ್ರಮನನ್ನು ತರುತ್ತಿರುವಾಗ ಮಾರ್ಗದಲ್ಲಿ ರಾಕ್ಷಸ(ನೊಬ್ಬನು) ತಡೆಯಲು ಕುಪಿತರಾಗಿ (ಭೂತರಾಜರು) ರಥದ ಚಕ್ರವೊಂದರಿಂದ ಆತನನ್ನು ಕೊಂದು, ನಿಶ್ಚಿತವಾದ ಸುಮುಹೂರ್ತದಲ್ಲಿ ಯತಿಗಳಿಗೆ ರಥವನ್ನು ಅರ್ಪಿಸಿದರು.

**ಶ್ಲೋಕ:–** **ರಾಜ್ಞಾ ಸಹ ಯತೀಂದ್ರೋऽಸೌ ತ್ರಿವಿಕ್ರಮಮುದಾರಧೀಃ ।**
**ಪ್ರಾತಿಷ್ಠಿಪದ್ರಥೇ ತತ್ರ ದೇವಸ್ಯಾಗಾರಮಧ್ಯಗೇ ॥44॥**

**ಅರ್ಥ:–** ಉದಾರಬುದ್ಧಿಯುಳ್ಳ ಯತಿ ಶ್ರೇಷ್ಠರಾದ ಶ್ರೀ ವಾದಿರಾಜರು ರಾಜನೊಂದಿಗೆ ಆ ದೇವಾಲಯದ ಮಧ್ಯೆ ರಥದಲ್ಲಿ ತ್ರಿವಿಕ್ರಮ ಮೂರ್ತಿಯನ್ನು ಪ್ರತಿಷ್ಠಾಪನೆ ಮಾಡಿದರು.

**ಶ್ಲೋಕ:–** **ಹಯಗ್ರೀವಸಮುದ್ರಸ್ಯ ನಿಕಟೇ ಶ್ರಿಯಮಾದರಾತ್ ।**
**ಸೋऽಯಂ ತ್ರಿವಿಕ್ರಮರಥಸ್ತ್ರಿಚಕ್ರೋऽದ್ಯಾಪಿ ಶೋಭತೇ ॥45॥**

**ಅರ್ಥ:–** ಹಯಗ್ರೀವ ಸಮುದ್ರದ ಸಮೀಪದಲ್ಲಿ ಶ್ರೀ ರಮಾದೇವಿಯರ ವಿಗ್ರಹವನ್ನು ಆದರದಿಂದ ಸ್ಥಾಪಿಸಿದರು. (ಈಗ ತ್ರಿವಿಕ್ರಮ ಗುಡಿಯಲ್ಲಿ ಇದೆ.) ಮೂರು ಚಕ್ರವುಳ್ಳ, ಆ ತ್ರಿವಿಕ್ರಮ ರಥವು ಈಗಲೂ ಶೋಭಿಸುತ್ತದೆ.

**ಶ್ಲೋಕ:–** **ತ್ರಿವಿಕ್ರಮಸ್ತಸ್ಯ ಮಧ್ಯೇ ಸಿತೋಪಲಮಯಃ ಶುಭಃ ।**
**ಭಕ್ತಾನುಗ್ರಹದಾತಾऽಸೌ ಯತಿಭಿಃ ಪೂಜ್ಯತೇऽಧುನಾ ॥46॥**

**ಅರ್ಥ:–** ಆ ರಥದೊಳಗೆ ಶುಭಕರವಾದ, ಭಕ್ತರನ್ನು ಅನುಗ್ರಹಿಸುವ ಶ್ವೇತ ಶಿಲಾಮಯನಾದ ತ್ರಿವಿಕ್ರಮನು ಈಗಲೂ ಯತಿಗಳಿಂದ ಪೂಜಿಸಲ್ಪಡುತ್ತಿದ್ದಾನೆ.

**ಶ್ಲೋಕ:–** **ದೇವಾಲಯೋತ್ತರೇ ಭಾಗೇ ನಿರ್ಮಮೇ ಸ ಸರೋವರಮ್ ।**
**ಯೋऽಸೌ ಧವಲಗಂಗಾಖ್ಯೋ ಗಂಗಾಸಾನ್ನಿಧ್ಯಪಾತ್ರತಃ ॥47॥**

**ಅರ್ಥ:–** ತ್ರಿವಿಕ್ರಮ ದೇವಾಲಯದ ಉತ್ತರದಿಕ್ಕಿನಲ್ಲಿ ಗಂಗಾಸನ್ನಿಧಾನಕ್ಕೆ ಪಾತ್ರಳಾದ (ಅಂದರೆ ಸನ್ನಿಧಾನವುಳ್ಳ) ಧವಳಗಂಗಾ ಎಂಬ ಹೆಸರಿನ ಸರೋವರವನ್ನು ನಿರ್ಮಾಣ ಮಾಡಿದರು.

**ಶ್ಲೋಕ:–** **ತತ್ತೀರೇ ವೇಣುಗೋಪಾಲಂ ಹನೂಮಂತಂ ಶಿವಂ ಪುನಃ ।**
**ಸ್ಥಾಪಯಾಮಾಸ ಭಕ್ತನಾಂ ಸೇವನಾಯ ಯತೀಶ್ವರಃ ॥48॥**

**ಅರ್ಥ:–** ಭಕ್ತರುಗಳು ಸೇವಿಸಲು ವೇಣುಗೋಪಾಲ ಹನುಮಂತ ಮತ್ತು ಶಿವನನ್ನು ಆ ಸರೋವರದ ತೀರದಲ್ಲಿ ಯತೀಶ್ವರರಾದ ವಾದಿರಾಜರು ಸ್ಥಾಪಿಸಿದರು.

**ಶ್ಲೋಕ:–** **ಪೂರ್ವಭಾಗೇ ವ್ಯಾಸದೇವಂ ಜಟಾಮಂಡಲಭಾಸಿತಮ್ ।**
**ಪ್ರತಿಷ್ಠಾಪ್ಯ ಪರೋ ಹಂಸಃ ಕೃತಕೃತ್ಯೋऽಭವನ್ಮುದಾ ॥49॥**

**ಅರ್ಥ:–** (ಸರೋವರದ) ಪೂರ್ವದಿಕ್ಕಿನಲ್ಲಿ ಜಟಾಮಂಡಲದಿಂದ ಶೋಭಿಸುವ ವ್ಯಾಸ ದೇವರನ್ನು ಪ್ರತಿಷ್ಠಾಪಿಸಿ ಕೃತಕೃತ್ಯರಾದ ಪರಮಹಂಸರಾದ ವಾದಿರಾಜರು ಸಂತೋಷಪಟ್ಟರು.

**ಶ್ಲೋಕ:–** **ಪ್ರತಿವರ್ಷಂ ಫಾಲ್ಗುನೇऽಥ ಪೌರ್ಣಮಾಸ್ಯಾಂ ಮಹೋತ್ಸವಃ ।**
**ಸಪ್ತೋತ್ಸವಕ್ರಮಾತ್ಕಾರ್ಯ ಇತ್ಯಾಜ್ಞಾಪಿತವಾನ್ಮುನಿಃ ॥50॥**

**ಅರ್ಥ:–** ಅನಂತರ ಪ್ರತಿವರ್ಷ ಫಾಲ್ಗುಣ ಮಾಸ ಹುಣ್ಣಿಮೆಯ ದಿವಸ, ಸಪ್ತೋತ್ಸವ ಕ್ರಮದಲ್ಲಿ ಮಹೋತ್ಸವವನ್ನು ಆಚರಿಸಬೇಕೆಂದು ವಾದಿರಾಜ ಮುನಿಗಳು ಆಜ್ಞಾಪಿಸಿದರು.

**ಶ್ಲೋಕ:–** **ಏವಂ ಶ್ರೀಕೃಷ್ಣದೇವಸ್ಯ ಪರ್ಯಾಯಾರ್ಚನಮಂಜಸಾ ।**
**ಚತುರ್ವಾರಮನುಷ್ಠಾಪ್ಯ ಸಜ್ಜನಾನುದ್ಧರನ್ ಬಭೌ ॥51॥**

**ಅರ್ಥ:–** (ಶ್ರೀ ವಾದಿರಾಜರು) ಶ್ರೀಕೃಷ್ಣದೇವರ ಪರ್ಯಾಯ ಪೂಜೆಯನ್ನು ನಾಲ್ಕುಸಲ ಚೆನ್ನಾಗಿ ಮಾಡಿ, ಸಜ್ಜನರನ್ನು ಉದ್ಧರಿಸುತ್ತಾ ಇದ್ದರು.

**ಶ್ಲೋಕ:–** **ತಚ್ಛಿಷ್ಯೋ ವೇದವೇದ್ಯಾಖ್ಯೋ ವೃದ್ಧೋ ಭೂತ್ವಾತ್ವಬಿದ್ಯತ ।**
**ಪರ್ಯಾಯಪೂಜಾ ನ ಮಮೇತ್ಯಂತರಂಗವಿದಾಂ ವರಃ ॥52॥**
**ವಾದಿರಾಜಃ ಸ್ವಶಿಷ್ಯಂ ತಂ ಪರ್ಯಾಯೇ ಪಂಚಮೇऽತ್ರ ಹಿ ।**
**ತ್ವಾಮಾವಿಶ್ಯಾಚರಿಷ್ಯಾಮಿ ಬಹಿಸ್ಸೋದಾಪುರೇ ಸ್ಥಿತಃ ॥53॥**

**ಇತ್ಯಾಜ್ಞಾಪ್ಯಾಗತಸ್ಸೋದಾಂ ವೇಣುಗೋಪಾಲಮರ್ಚಯನ್ ।**
**ಉಭಯತ್ರ ಸ್ವ ಪರ್ಯಾಯಪೂಜಾಂ ಸ ಕೃತವಾನ್ ಕಿಲ ॥54॥**

**ಅರ್ಥ:–** ಶ್ರೀ ವಾದಿರಾಜರ ಶಿಷ್ಯರಾದ ಶ್ರೀ ವೇದ ವೇದ್ಯರೆಂಬುವರು ವೃದ್ಧರಾಗಿ ತನಗೆ ಪರ್ಯಾಯ ಪೂಜಾ (ಭಾಗ್ಯ)ವಿಲ್ಲವೆಂದು ದುಃಖಿತರಾದರು. ಅಂತರಂಗವನ್ನು ತಿಳಿಯುವರಲ್ಲಿ ಶ್ರೇಷ್ಠರಾದ ವಾದಿರಾಜರು, ಶಿಷ್ಯರನ್ನು ಉಡುಪಿಯಲ್ಲಿ ಐದನೆಯ ಪರ್ಯಾಯ ಪೂಜೆಗೆ ಆಜ್ಞಾಪಿಸಿ, ತಾನು ಬಾಹ್ಯದಲ್ಲಿ ಸೋದಾಪುರಿಯಲ್ಲಿ ಸ್ಥಿತನಾಗಿ, ಹಾಗೆಯೇ ಆ ಶಿಷ್ಯರಲ್ಲಿ ಆವಿಷ್ಟನಾಗಿದ್ದು (ಪರ್ಯಾಯ ಪೂಜೆಯನ್ನು) ಮಾಡುವನೆಂದು ಸೋದಾಪುರಿಗೆ ಬಂದು ವೇಣುಗೋಪಾಲಮೂರ್ತಿಯನ್ನು ಅರ್ಚಿಸುತ್ತಾ ಉಭಯತ್ರ (ಉಡುಪಿ ಮತ್ತು ಸೋದಾಪುರಿಯಲ್ಲಿ) ತನ್ನ ಪರ್ಯಾಯ ಪೂಜೆಯನ್ನು ನೆರವೇರಿಸಿದರು.

**ಶ್ಲೋಕ:–** **ಕೃಷ್ಣಪರ್ಯಾಯೋತ್ಸವಾರ್ಥಂ ಯಿಯಾಸುರ್ಜನತಾ ಕಿಲ ।**
**ಸ್ವಪ್ನಸೂಚಿತಮಹಾತ್ಮ್ಯಾಸೋದಾಮೇತ್ಯಾಭಜದ್ಗುರುಮ್ ॥55॥**

**ಅರ್ಥ:–** ಶ್ರೀ ಕೃಷ್ಣಪರ್ಯಾಯೋತ್ಸವಕ್ಕೆ ಹೋಗಲಿಚ್ಛಿಸಿದ ಸಜ್ಜನರಿಗೆ ಸ್ವಪ್ನದಲ್ಲಿ ಈ ಮಹಾತ್ಮೆಯು ಸೂಚಿತವಾಗಿ (ಅವರುಗಳು) ಸೋದಾಪುರಿಗೆ ಹೋಗಿ ಗುರುಗಳನ್ನು ಸೇವಿಸಿದರು.

**ಶ್ಲೋಕ:–** **ಅಶ್ವತ್ಥಚೂತಪನಸಾಮ್ಲಸುನಾರಿಕೇಲ**
**ಧಾತ್ರೀಕ್ಷುದಂಡಕದಲೀವನಮಧ್ಯಗಾ ಯಾ।**
**ವೃಂದಾವನಾಷ್ಟಕಪಿನಾಕಿಹನೂಮತಾಂ ಚ**
**ಮಧ್ಯೇಸ್ಥಿತಾ ತು ಧವಲೇತಿ ಸುದಿವ್ಯನಾಮ್ನೀ ॥**
**ನ್ಯಧಾದಷ್ಟತಸ್ಸನ್ಯಾಂಸ್ತ ಇತ್ಯಾಖ್ಯಾನೇ ಪ್ರಕೀರ್ತಿತಾಃ ।**
**ಇತಿ ಭಾವಿಸಮೀರೋಽಸೌ ವಾದಿರಾಜೋಽದ್ಭುತಕ್ರಿಯಃ ॥56॥**

**ಅರ್ಥ:–** ಅಶ್ವತ್ಥ, ಮಾವು, ಹಲಸು, ಹುಣಸೆ, ತೆಂಗು, ನೆಲ್ಲಿ, ಕಬ್ಬು, ಬಾಳೆ, ವನಗಳ ಮಧ್ಯದಲ್ಲೂ ಎಂಟು ತುಳಸಿ ವೃಂದಾವನ ರುದ್ರ ದೇವರು ಹನುಮಂತದೇವರು, ಇವರ ಮಧ್ಯದಲ್ಲೂ ಧವಳ (ಗಂಗಾ) ಎನ್ನುವ ದಿವ್ಯವಾದ ಹೆಸರುಳ್ಳ (ಸರೋವರ) ಮತ್ತು ಅಷ್ಟಕಗಳಿಂದ ಬೇರೆಯಾದುದನ್ನು ಸ್ಥಾಪಿಸಿದರು. ಈ ರೀತಿಯಾಗಿ ಸ್ವಾಪ್ನ ವೃಂದಾದನಖ್ಯಾನದಲ್ಲಿ ಉಕ್ತವಾಗಿದೆ.

**ಟಿಪ್ಪಣಿ:–** ಅಶ್ವತ್ಥ, ಮಾವು, ಹಲಸು, ಹುಣಸೆ, ತೆಂಗು, ನೆಲ್ಲಿ, ಕಬ್ಬು, ಬಾಳೆ,–ಎಂಟು ತುಳಸಿ ವೃಂದಾವನ ಎಂಟು, ವೇಣುಗೋಪಾಲ, ರುದ್ರ, ಹನುಮಂತ, ಧವಳಗಂಗಾ ವೇದವ್ಯಾಸ, ಭೂತರಾಜರು, ಪಾಪನಾಶಿನಿ, ಪಂಚವೃಂದಾವನಸ್ಥ ತ್ರಿವಿಕ್ರಮ ದೇವರು ಮೇಲು ಭಾಗದಲ್ಲಿ.

**ಶ್ಲೋಕ:–** **ಲೋಕಾನುಗ್ರಹಮಾತೇನೇ ಶ್ರೀಮಧ್ವಮತವರ್ಧಕಃ ।**
**ಅಮೋಘಬಹುಲಗ್ರಂಥೈಃ ಶತಾಧಿಕಸುಸಂಖ್ಯಯಾ ॥57॥**

**ಅರ್ಥ:–** ಹೀಗೆ ಅದ್ಭುತ ಕಾರ್ಯಗಳನ್ನು ಮಾಡಿದ, ಭಾವೀ ಸಮೀರರಾದ ಮಧ್ವಮತ ವರ್ಧಕರಾದ ಶ್ರೀ ವಾದಿರಾಜರು (ತಾವು ರಚಿಸಿದ) ನೂರಕ್ಕಿಂತಲೂ ಅಧಿಕವಾದ ಅಮೋಘವಾದ ಬಹು ಗ್ರಂಥಗಳಿಂದ ಲೋಕಾನುಗ್ರಹವನ್ನು ಮಾಡಿದರು.

**ಶ್ಲೋಕ:–** **ಅಮಾನುಷಕ್ರಿಯಾಭಿಶ್ಚ ಲೋಕೋಪಕೃತಿಭಿರ್ಯತಿಃ ।**
**ಮಧ್ವಸ್ಯ ಗುರುಸಮ್ರಾಜೋ ಯುವರಾಜಾಯಿತಃ ಕೃತೀ ॥58॥**

**ಅರ್ಥ:–** ಅಮಾನುಷ ಲೀಲೆಯಿಂದಲೂ, ಲೋಕೋಪಕಾರಕ ಕಾರ್ಯದಿಂದಲೂ ಜ್ಞಾನಿಗಳಾದ ಯತಿ ವಾದಿರಾಜರು ಮಧ್ವಗುರುಗಳ ಸಾಮ್ರಾಜ್ಯದಲ್ಲಿ ಯುವರಾಜರಂತೆ ಕಂಗೊಳಿಸಿದರು.

**ಶ್ಲೋಕ:–** **ಸ್ವಾವತಾರಕ್ರಿಯಾಪೂರ್ತಿರಾಸೀದಿತಿ ವಿಚಿಂತಯನ್ ।**
**ಪಂಚವೃಂದಾವನಂ ಮತ್ಸ್ಯಕೂರ್ಮಾದ್ಯಾಕೃತಿಶೋಭಿತಮ್ ॥59॥**
**ಹನುಮದ್ಭೀಮಮಧ್ವಾತ್ಮಚತುರಾಕೃತಿಸುಂದರಮ್ ।**
**ಉಪರಿಷ್ಟಾದ್ಧಯಗ್ರೀವ ಮೂರ್ತಿರಾಜಿತಮುನ್ನತಮ್ ॥60॥**
**ಕಾರಯಿತ್ವಾಽಗಾರಮಧ್ಯೇ ಪಶ್ಚಿಮೇ ವ್ಯಾಸಸನ್ಮುಖೇ**

**ಅರ್ಥ:–** ತಮ್ಮ ಅವತಾರಕಾರ್ಯ ಪೂರ್ತಿಯಾಯಿತೆಂದು ಆಲೋಚಿಸಿ, ಮತ್ಸ್ಯಕೂರ್ಮಾದಿ ಆಕೃತಿಗಳಿಂದ ಶೋಭಿತವಾದ (ನಾಲ್ಕು ಉಪವೃಂದಾವನಗಳನ್ನೂ) ಹನುಮ, ಭೀಮ, ಮಧ್ವ ಮತ್ತು ತಮ್ಮ ನಾಲ್ಕು ಆಕೃತಿಗಳಿಂದ (ಮತ್ತು

ಮುಂಭಾಗದ) ಮೇಲ್ಭಾಗದಲ್ಲಿ ಹಯಗ್ರೀವ ಮೂರ್ತಿಯಿಂದ ಅಲಂಕೃತವಾದ ಸುಂದರವಾದ ಎತ್ತರವಾದ (ವೃಂದಾವನ–ಹೀಗೆ) ಪಂಚವೃಂದಾವನವನ್ನು ಮಾಡಿಸಿ ಗುಡಿಯ ಮಧ್ಯಭಾಗದಲ್ಲಿ ಪಶ್ಚಿಮ ದಿಕ್ಕಿನಲ್ಲಿ ವೇದವ್ಯಾಸರ ಎದುರಿಗೆ ಸ್ಥಾಪಿಸಿದರು.

**ಶ್ಲೋಕ:– ಪಂಚವೃಂದಾವನಸ್ಯಾಥ ಭೂತರಾಜಂ ಚ ದಕ್ಷಿಣೇ ॥61॥**
**ತ್ರಿವಿಕ್ರಮಸ್ಯ ಚೈಶಾನ್ಯಾಂ ಕ್ಷೇತ್ರಪಾಲಸ್ಥಲೇ ಪುನಃ ।**
**ಭೂತರಾಜಂ ಪ್ರತಿಷ್ಠಾಪ್ಯ ತ್ರಿವಿಕ್ರಮರಥೋತ್ಸವಮ್ ॥62॥**
**ಕಾರಯನ್ ಸ್ವೇಷ್ಟವೇತ್ತ್ರಾ ತು ಶಕ್ರೇಣ ಪ್ರೇಷಿತಂ ಶುಭಮ್ ।**
**ವಿಮಾನಂ ಪಿಪ್ಪಲಸ್ಯಾಗ್ರೇ ತಿಷ್ಠತ್ವಾಂತಂ ಮಹಸ್ಯ ಹಿ ॥63॥**
**ಮಹೋತ್ಸವಂ ಸಮಾಪ್ಯಾಥ ಭಕ್ತಾನಾಮಕ್ಷತಾನ್ ದದತ್ ।**

**ಅರ್ಥ:–** ಭೂತರಾಜರನ್ನು ವೃಂದಾವನದ ದಕ್ಷಿಣ ದಿಕ್ಕಿನಲ್ಲಿ (ಸ್ಥಾಪಿಸಿ) ಪುನಃ ಭೂತರಾಜನ್ನು ತ್ರಿವಿಕ್ರಮ ದೇವರ ಈಶಾನ್ಯ ದಿಕ್ಕಿನಲ್ಲಿ ಕ್ಷೇತ್ರಪಾಲನ ಸ್ಥಳದಲ್ಲಿ ಸ್ಥಾಪಿಸಿದರು. ತ್ರಿವಿಕ್ರಮ ರಥೋತ್ಸವನ್ನು ನೆರವೇರಿಸುತ್ತಾ, ತನಗೆ ಇಷ್ಟವಾದುದನ್ನೇ ತಿಳಿದ ಇಂದ್ರನಿಂದ ಕಳುಹಿಸಲ್ಪಟ್ಟ ಶುಭವಾದ ವಿಮಾನವನ್ನು ಅಶ್ವತ್ಥ ವೃಕ್ಷದ ಮೇಲ್ಭಾಗದಲ್ಲಿ ನಿಲ್ಲಿಸಿದರು. ಸಂತೋಷಕಾರ್ಯದ ಕೊನೆಯಲ್ಲಿ ತ್ರಿವಿಕ್ರಮ ಮಹೋತ್ಸವನ್ನು ಮುಗಿಸಿ. ಭಕ್ತರಿಗೆ ಮಂತ್ರಾಕ್ಷತೆಯನ್ನು ಕೊಟ್ಟರು.

**ಶ್ಲೋಕ:– ಮಧ್ಯವೃಂದಾವನಸ್ಯಾಂತಃ ಪ್ರವಿಶ್ಯ ಜಪತೋ ಮಮ ॥64॥**
**ಯದಾ ಹಸ್ತಾದಕ್ಷಮಾಲಾ ಪತೇದಗ್ರಶಿಲಾ ಶುಭಾ ।**
**ಆಚ್ಛಾದ್ಯತಾಮಿತಿ ಸ್ವೀಯಾನಾಜ್ಞಾಪ್ಯ ಪ್ರಾತರಂಜಸಾ ॥65॥**
**ಸಂಪೂಜ್ಯಾಶ್ವಾಸ್ಯಮಾನಮ್ಯ ತದ್ವೃಂದಾವನಮಧ್ಯಗಃ ।**
**ಜಪನ್ ಸ್ಥಿತೋಽಥ ತದ್ಧಸ್ತಾಜ್ಜಪಮಾಲಾ ಪಪಾತ ಹಿ ॥66॥**
**ಆಚ್ಛಾದಿತೇಽಗ್ರಪಾಷಾಣೇ ಗಗನೇ ಘಂಟಕಾಧ್ವನಿಮ್ ।**
**ಶೃಣ್ವಂತೋ ದದೃಶುರ್ಭಕ್ತಾ ಮಿಮಾನಸ್ಥಮೃಜೂತ್ತಮಮ್ ॥67॥**

**ಅರ್ಥ:–** ಮಧ್ಯದಲ್ಲಿರುವ ವೃಂದಾವನದೊಳಗೆ ಪ್ರವೇಶಿಸಿ ಜಪಮಾಡುವ ನನ್ನ ಕೈಯಲ್ಲಿರುವ ಅಕ್ಷಮಾಲೆಯು ಬಿದ್ದ ಕೂಡಲೇ (ವೃಂದಾವನದ) ಅಗ್ರಭಾಗವನ್ನು ಉತ್ತಮವಾದ ಶಿಲೆಯಿಂದ ಮುಚ್ಚತಕ್ಕದ್ದು ಎಂದು ತಮ್ಮವರಿಗೆ ಆಜ್ಞಾಪಿಸಿ ಪ್ರಾತಃಕಾಲದಲ್ಲಿ ಹಯಗ್ರೀವ ದೇವರನ್ನು ಅತಿಶಯವಾಗಿ ಪೂಜಿಸಿ ನಮಸ್ಕರಿಸಿ ಆ ವೃಂದಾವನದ ಮಧ್ಯಭಾಗದಲ್ಲಿರುವವರಾಗಿ ಜಪಮಾಡುತ್ತ ಕುಳಿತುಕೊಂಡರು. ಜಪಮಾಲೆಯು ಬಿದ್ದಿತು. (ವೃಂದಾವನದ) ಅಗ್ರಭಾಗವನ್ನು ಶಿಲೆಯಿಂದ ಮುಚ್ಚಿದ ಕೂಡಲೇ ಆಕಾಶದಿಂದ (ಬರುತ್ತಿದ್ದ) ಘಂಟೆ ಶಬ್ಧವನ್ನು ಕೇಳಿದ ಭಕ್ತರು ವಿಮಾನದಲ್ಲಿ ಸ್ಥಿತರಾದ ಉತ್ತಮ ಋಜುಗಳಾದ ವಾದಿರಾಜರನ್ನು ದರ್ಶನ ಮಾಡಿದರು.

**ಶ್ಲೋಕ:– ಕರುಣಾಲೋ ನ ಮುಂಚಾಸ್ಮಾನ್ ಪದಭಕ್ತಾನನಾಥಕಾನ್ ।**
**ಕಾ ಗತಿರ್ನ ಇತಿ ಪ್ರೋಚ್ಚೈರಾಕ್ರಂದನಪರಾನ್ ಸ್ವಕಾನ್ ॥68॥**
**ಆಶ್ವಾಸಯನ್ ಸ್ವೀಯಶಾಟೀಂ ಪಾದುಕೇ ಚ ಹಿರಣ್ಮಯೇ ।**
**ಅಧಃ ಪ್ರಕ್ಷಿಪ್ಯ ಮಾ ಭೈಷ್ಟ ಮಧ್ವೃಂದಾವನಗಸ್ತ್ವ ಹಮ್ ॥69॥**
**ಏಕಾಂಶೇನೇಷ್ಟದಾತಾಽಸ್ಮೀತ್ಯುಕ್ತ್ವಾಽಗಾತ್ಸ ಸುರಾಲಯಮ್ ।**
**ಭಕ್ತಾಃ ಶಾಟೀಂ ಪಾದುಕೇ ಚ ಪೂಜಯಾಮಾಸುರಾದರಾತ್ ॥70॥**

**ಅರ್ಥ:–** **"**ಹೇ ದಯಾಲುವೇ! ನಿಮ್ಮ ಪಾದ ಭಕ್ತರಾದ ನಮ್ಮನ್ನು ಬಿಡಬೇಡಿರಿ ನಮಗೆ ಗತಿ ಏನು?**"** ಎಂದು ಉಚ್ಛಸ್ವರದಿಂದ ಆಕ್ರಂದನ ಮಾಡಿದರು.

ತಮ್ಮವರಿಗೆ ಆಶ್ವಾಸನೆನ್ನೀಯುತ್ತಾ ತನ್ನ ಕಾವಿಶಾಟಿ ಮತ್ತು ಹಿರಣ್ಮಯವಾದ ಪಾದುಕೆಯನ್ನು ಕೆಳಗೆ ಹಾಕಿ, **"**ಹೆದರಬೇಡಿ, ಒಂದು ಅಂಶದಿಂದ ನನ್ನ ವೃಂದಾವನದಲ್ಲಿದ್ದು ಅಭೀಷ್ಟವನ್ನು ಪೂರೈಸುವೆನು**"** ಎಂದು ಹೇಳಿ ದೇವಲೋಕಕ್ಕೆ ಹೋದರು. ಭಕ್ತರು ಕಾವಿಶಾಟಿಯನ್ನು ಮತ್ತು ಪಾದುಕೆಯನ್ನು ಭಕ್ತಿಯಿಂದ ಪೂಜಿಸಿದರು.

**ಶ್ಲೋಕ:– ಶತೇವಿಂಶತ್ಯುತ್ತರೇ ತು ವತ್ಸರಾಣಾಂ ಮಹೀತಲೇ ।**
**ವಾದಿರಾಜೋಽವಸದ್ದೃಶ್ಯೋ ಮಧ್ವಸಿದ್ದಾಂತವೃದ್ದಯೇ ॥71॥**

**ಅರ್ಥ:–** ಮಧ್ವ ಸಿದ್ಧಾಂತದ ಅಭ್ಯುದಯಕ್ಕಾಗಿ ಭೂಮಿಯಲ್ಲಿ ಶ್ರೀವಾದಿರಾಜರು ನೂರಾ ಇಪ್ಪತ್ತು ವರ್ಷಗಳ ಕಾಲ ದೃಷ್ಟಿಗೊಚರರಾಗಿ ವಾಸಿಸಿದರು.

**ಶ್ಲೋಕ:–** **ಸ್ವಸ್ತಿ ಶ್ರೀ ಜಯ ಶಾಲಿವಾಹನಶಕೆ ಸಾರ್ಧಾತ್ಸಹಸ್ರಾತ್ವರಂ**
**ದ್ವಾವಿಂಶೇ ಶರದಾಂಗತೇ ಪ್ರಭವತಿ ಶ್ರೀ ಶಾರ್ವರೀವತ್ಸರೇ ।**
**ಮಾಸೇ ಫಾಲ್ಗುನಿಕೇ ಸಿತೇತರತೃತೀಯಾಯಾಂ ತಿಥೌ ವಿದ್ದಿನೇ**
**ಸ್ವಾತಿಹರ್ಷಣಸಂಯುತೇ ಹರಿಪದಂ ಶ್ರೀವಾದಿರಾಜೋಽಗಮತ್ ॥72॥**

**ಅರ್ಥ:–** ಸ್ವಸ್ತಿ ಶ್ರೀ ಶಾಲಿವಾಹನ ಶಕೆಯಲ್ಲಿ 1522 ವರ್ಷಗಳು ಕಳೆಯಲು, ಶ್ರೀ ಶಾರ್ವರೀ ಸಂವತ್ಸರವು ಪ್ರಾರಂಭವಾಗಲು ಪಾಲ್ಗುಣಮಾಸ ಕೃಷ್ಣ ಪಕ್ಷ ತೃತೀಯ ತಿಥಿ, ಸ್ವಾತಿ ನಕ್ಷತ್ರ, ಹರ್ಷಣಯೋಗದಿಂದ ಕೂಡಿದ ಬುಧವಾರ ಹರಿಪಾದವನ್ನು ಶ್ರೀವಾದಿರಾಜರು ಸೇರಿದರು.

**ಶ್ಲೋಕ:–** **ಇತಿ ಶ್ರೀ ವೇದನಿಧಿತೀರ್ಥಾಂತೇವಾಸಿ ಶ್ರೀರಾಮಚಂದ್ರಾಚಾರ್ಯವಿರಚಿತೇ**
**ಶ್ರೀ ವಾದಿರಾಜಗುರುವರಚರಿತಾಮೃತೇ ಷಷ್ಠಬಿಂದುಃ ಸಮಾಪ್ತಃ ।**

**ಅರ್ಥ:–** ಇಲ್ಲಿಗೆ ಶ್ರೀ ವೇದನಿಧಿತೀರ್ಥರ ವಿದ್ಯಾಶಿಷ್ಯರಾದ ರಾಮಚಂದ್ರಾಚಾರ್ಯ ರಿಂದ ವಿರಚಿತವಾದ ಶ್ರೀ ವಾದಿರಾಜ ಗುರುವರ ಚರಿತಾಮೃತದಲ್ಲಿ ಆರನೆಯ ಬಿಂದು ಮುಗಿಯಿತು.

## ॥ ಸಪ್ತಮ ಬಿಂದುಃ ॥

**ಶ್ಲೋಕ:–** **ಸಾಕ್ಷಾಚ್ಛಿಷ್ಯೋ ವೇದವೇದ್ಯಃ ಪಶ್ಚಾದ್ದರ್ಶನಭಾಷಣೇ ।**
**ಸ್ವಗುರೋಃ ಕಾಂಕ್ಷಮಾಣಃ ಸನ್ನಿತ್ಯಸೇವಪರೋಽಭವತ್ ॥1॥**

**ಅರ್ಥ:–** (ವಾದಿರಾಜರು ವೃಂದಾವನ ಪ್ರವೇಶ ಮಾಡಿದ) ನಂತರ ಸಾಕ್ಷಾತ್ ಶಿಷ್ಯರಾದ ವೇದವೇದ್ಯರು ತಮ್ಮ ಗುರುಗಳ ದರ್ಶನ ಮತ್ತು ಸಂಭಾಷಣ ನಡೆಸಬೇಕೆಂಬ ಅಪೇಕ್ಷೆಯುಳ್ಳವರಾಗಿ ಪ್ರತಿದಿನ ಸೇವಾಮಾಡುವವರಾದರು.

**ಶ್ಲೋಕ:–** **ಉಭಯಂ ದುರ್ಲಭಂ ತ್ವೇಕಂ ದಾಸ್ಯಾಮೀತಿ ಪ್ರಭೋಧಿತಃ ।**
**ಸ್ವಪ್ನೇ ದರ್ಶನಮೈಚ್ಛತ್ಸ ವೃಂದಾವನ ಪುರೋಗತಃ ॥2॥**

**ಅರ್ಥ:–** (ದರ್ಶನ ಹಾಗೂ ಸಂಭಾಷಣೆ) ಎರಡೂ ಸಾಧ್ಯವಿಲ್ಲ ಆದರೆ ಒಂದನ್ನು ಕೊಡುವೆನು ಎಂಬುದಾಗಿ ಸ್ವಪ್ನದಲ್ಲಿ (ಗುರುಗಳಿಂದ) ತಿಳಿಸಲ್ಪಟ್ಟರು. ವೇದವೇದ್ಯರು ದರ್ಶನ ಪಡೆಯಲು ಅಪೇಕ್ಷೆಯುಳ್ಳವರಾಗಿ ವಾದಿರಾಜರ ವೃಂದಾವನದ ಮುಂದೆ ಹೋದರು.

**ಶ್ಲೋಕ:–** **ಭೂತರಾಜಾಪನೀತಾಯಾಂ ಶಿಲಾಯಾಮಗ್ರತೋ ಗುರುಮ್ ।**
**ಧ್ಯಾನಾಸಕ್ತಂ ದಿವ್ಯತೇಜೋಮೂರ್ತಿಂ ಪರಮುದೈಕ್ಷತ ॥3॥**
**ಭಕ್ತ್ಯಾ ನಮನ್ ವಿವಕ್ಷುಃ ಸ ದದರ್ಶಾಗ್ರಾಶ್ಮಬಂಧನಮ್ ।**

**ಅರ್ಥ:–** ಭೂತರಾಜರಿಂದ ಶಿಲೆಯು ಸರಿಸಲ್ಪಡಲು, ಮುಂದಿನಿಂದ, ಧ್ಯಾನಾಸಕ್ತರಾದ, ದಿವ್ಯ ತೇಜೋಮೂರ್ತಿಯಾದ ವಾದಿರಾಜರನ್ನು ಪರಮ ಸಂತೋಷದಿಂದ ನೋಡಿದರು. ಭಕ್ತಿಯಿಂದ ನಮಸ್ಕರಿಸುತ್ತಾ ಮಾತನಾಡಲು ಇಚ್ಛಿಸಿದಾಗ ಮುಂದುಗಡೆ ಕಲ್ಲು ಮುಚ್ಚಿರುವುದನ್ನು ಅವರು ನೋಡಿದರು.

**ಶ್ಲೋಕ:–** **ವೇದವೇದ್ಯಗುರೋಃ ಶಿಷ್ಯೋ ವೇದನಿಧ್ಯಾಖ್ಯಯೋಗಿರಾಟ್ ॥4॥**
**ಯಂ ವದಂತಿ ಮಹಾಪ್ರಾಜ್ಞಾ ಗರುಡಸ್ಯಾಂಶಸಂಭವಮ್ ।**
**ಸುಪೌತ್ರನಿರ್ವಿಶೇಷಂ ತಂ ವಾದಿರಾಟ್ಪ್ರೇಮಭಾಜನಮ್ ॥5॥**

**ಅರ್ಥ:–** ವೇದ–ನಿಧಿಯೆಂಬ ಯೋಗಿವರ್ಯರು ವೇದವೇದ್ಯ ಗುರುಗಳ ಶಿಷ್ಯರು. ಅವರು ಮಹಾಜ್ಞಾನಿಗಳು ಮತ್ತು ಗರುಡಾಂಶ ಸಂಭೂತರು ಎಂದು ಹೇಳುತ್ತಾರೆ. ಅವರು ವಾದಿರಾಜರ ಅತ್ಯಂತ ಪ್ರೀತಿಗೆ ಪಾತ್ರರಾಗಿದ್ದರು.

**ಶ್ಲೋಕ:–** **ಅಭ್ಯಂಗಪಾತ್ರಹೇತೋರ್ಹಿ ಸೋದಾಭೂಪಾಲಕಂ ಪುರಾ ।**
**ಕಾರಾಯಾಂ ವಾಸಯಾಮಾಸ ಸ್ವಯಂ ರಾಜ್ಯಂ ಸ್ಮ ಪಾತಿ ಹಿ ॥6॥**

**ಅರ್ಥ:–** ಹಿಂದೆ ಅಭ್ಯಂಗ ಪಾತ್ರೆಯ ನಿಮಿತ್ತದಿಂದ ಸೋದಾರಾಜನನ್ನು ಕಾರಾಗೃಹದಲ್ಲಿ ವಾಸಿಸುವಂತೆ ಮಾಡಿ ತಾವೇ ಸ್ವತಃ ರಾಜ್ಯಭಾರ ಮಾಡುತ್ತಿದ್ದರು.

**ಶ್ಲೋಕ:–** **ತಚ್ಛ್ರುತ್ವಾ ವಾದಿರಾಟ್ ಪ್ರಾಪ್ತಃ ವಿಮೋಚ್ಯ ನೃಪಮಾದರಾತ್ ।**
**ಶಶಾಸ ಸ್ವಪ್ರಶಿಷ್ಯಂ ತು ಮೌಢ್ಯಾದ್ರಾಜ್ಯಪ್ರಶಾಸನಾತ್ ॥7॥**

**ಅರ್ಥ:–** ಆ ವಿಷಯವನ್ನು ಕೇಳಿ ವಾದಿರಾಜರು ಸೋದಾಪುರಿಗೆ ಬಂದು ರಾಜನನ್ನು ಗೌರವದಿಂದ ಬಿಡುಗಡೆ ಮಾಡಿ, ಮೂಢತನದಿಂದ ರಾಜ್ಯವನ್ನಾಳಿದ ತಮ್ಮ ಪ್ರಶಿಷ್ಯನನ್ನು ಶಿಕ್ಷಿಸಿದರು.

**ಶ್ಲೋಕ:–** **ಯದಘಂ ನರಕಾವಾಪ್ತಿಕಾರಣಂ ತತ್ಪ್ರಶಾಂತಯೇ ।**
**ಏಕವಿಂಶದ್ದಿನೇ ಹ್ಯತ್ರ ನರಕಾಯಿತಕುಂಡಕೇ ॥8॥**
**ವಸ್ತವ್ಯಂ ಭವತೇತ್ಯಾರ್ಯಶಾಸನಾದ್ಗುರುರಾಣ್ಮಮ ।**
**ಉವಾಸ ಕುಂಡಕೇ ತತ್ರ ಗುರ್ವಾಜ್ಞಾಗೌರವಾತ್ ಸ್ವಯಮ್ ॥9॥**

**ಅರ್ಥ:–** (ರಾಜ್ಯವಾಳಿದ) ಪಾಪವು ನರಕವಾಸಕ್ಕೆ ಕಾರಣವು, ಅದರ ಪರಿಹಾರಕ್ಕೆ ಇಪ್ಪತ್ತೊಂದು ದಿನಗಳು ಇಲ್ಲಿ (ಸೋದಾಕ್ಷೇತ್ರದಲ್ಲಿ) ನರಕವನ್ನು ಅನುಭವಿಸುವ ಕುಂಡದಲ್ಲಿ ವಾಸಿಸಬೇಕು ಎನ್ನುವ ತಮ್ಮ ಪರಮ ಗುರುಗಳಾದ ಗುರುರಾಜರ ಶಾಸನದಂತೆ, ಗುರ್ವಾಜ್ಞೆಯನ್ನು ಗೌರವಿಸಲು ತಾವೇ ಆ ಕುಂಡದಲ್ಲಿ ವಾಸಿಸಿದರು.

**ಶ್ಲೋಕ:–** **ತತೋ ಗುರುಪದಾರೂಢಃ ಶ್ರೀವೇದನಿಧಿಯೋಗಿರಾಟ್ ।**
**ಅತ್ಯುನ್ನತಂ ಧ್ವಜಸ್ತಂಭಂ ರಾಜಮಾನಂ ಶಿಲಾಮಯಮ್ ॥10॥**
**ಶ್ರೀವಾದಿರಾಜತೀರ್ಥಸ್ಯ ಕೀರ್ತಿಸ್ತಂಭಮಿವಾವನೌ ।**
**ಸ್ಥಾಪಯಾಮಾಸ ಪರಮಭಕ್ತ್ಯಾ ಲಕ್ಷ್ಮೀಪತೇಃ ಪುರಃ ॥11॥**

**ಅರ್ಥ:–**ಅನಂತರ ಗುರುಪೀಠಾರೋಹಣ ಮಾಡಿದ ಶ್ರೀ ವೇದನಿಧಿ ಯೋಗಿವರ್ಯರು ಅತಿ ಎತ್ತರವಾದ, ಶಿಲಾಮಯವಾದ, ರಾಜ ಚಿಹ್ನೆಯಾದ, ಭೂಮಿಯಲ್ಲಿ ಶ್ರೀವಾದಿರಾಜರ ಕೀರ್ತಿಕಂಭರೂಪವಾದ ಸ್ತಂಭವನ್ನು ಲಕ್ಷ್ಮೀಪತಿಯಾದ ತ್ರಿವಿಕ್ರಮ ದೇವರ ಮುಂಭಾಗದಲ್ಲಿ ಬಹಳ ಭಕ್ತಿಯಿಂದ ಸ್ಥಾಪಿಸಿದರು.

**ಶ್ಲೋಕ:–** **ಶಿಲಾಸ್ತಂಭೋಽಪತತ್ತತ್ರ ಸ್ಥಾಪಿತೋಽಪಿ ಪುನಃ ಪುನಃ ।**
**ಗುರುರಾಟ್ ಖಿನ್ನಹೃದಯೋ ವಾದಿರಾಜಮಥಾರ್ಥಯತ್ ॥12॥**

**ಅರ್ಥ:–** ಅಲ್ಲಿ ಪುನಃ ಪುನಃ ಸ್ಥಾಪಿಸಲ್ಪಟ್ಟರೂ ಕೂಡ ಶಿಲಾಮಯವಾದ ಧ್ವಜಸ್ತಂಭವು ಬಿದ್ದಿತು. ಅದರಿಂದ ಖಿನ್ನ ಮನಸ್ಕರಾದ ವೇದನಿಧಿಗುರುಗಳು ವಾದಿರಾಜರನ್ನು ಪ್ರಾರ್ಥಿಸಿದರು.

**ಶ್ಲೋಕ:–** **ತನ್ನಿಶಿ ಸ್ವಪ್ನಕೇ ವತ್ಸ ಹಂಸಾರೂಢಾಕೃತಿಂ ಮಮ ।**
**ಉತ್ಕೃತ್ಯಾಥ ಶಿಲಾಸ್ತಂಭೇ ನ್ಯಸೇಶ್ಚೇತ್ತಿಷ್ಠತಿ ಸ್ಥಿರಃ ॥13॥**
**ಇತಿ ಶ್ರೀವಾದಿರಾಜಾರ್ಯೈಃ ಪರಮೈರ್ಗುರುಭಿಃ ಸ್ಫುಟಮ್ ।**
**ಸೂಚಿತಾರ್ಥಸ್ತಥಾ ಚಕ್ರೇ ಸ್ತಂಭೋಽತಿಷ್ಠದವಿಘ್ನತಃ ॥14॥**

**ಅರ್ಥ:–** ಆದಿನ ರಾತ್ರಿ (ವೇದನಿಧಿಗಳ) ಸ್ವಪ್ನದಲ್ಲಿ "ವತ್ಸ ! ಹಂಸರೂಢರಾದ ನನ್ನ ಆಕೃತಿಯನ್ನು ಶಿಲಾಸ್ತಂಭದ ಲ್ಲಿ ಕೆತ್ತಿಸಿದರೆ, ಅದು ಸ್ಥಿರವಾಗಿ ನಿಲ್ಲುವುದು" ಎಂದು ಪರಮಗುರುಗಳಾದ ವಾದಿರಾಜರಿಂದ ಸ್ಪಷ್ಟವಾಗಿ ಸೂಚಿತವಾಯಿತು, ಹಾಗೆಯೇಮಾಡಿಸಲು ಸ್ತಂಭವು ನಿರ್ವಿಘ್ನವಾಗಿ ಸ್ಥಾಪಿತವಾಯಿತು.

**ಶ್ಲೋಕ:–** **ತ್ರಿವಿಕ್ರಮಾಗ್ರೇ ಸೋದಯಾಮದ್ಯಾಪಿ ಪರಿದೃಶ್ಯತೇ।**
**ಹಂಸಾರೂಢಲಸದ್ವಾದಿರಾಜಮೂರ್ತಿ : ಶಿಲಾಮಯಃ ॥ ೧೫ ॥**

**ಅರ್ಥ:–** ಸೋದಾಕ್ಷೇತ್ರದಲ್ಲಿ ಈಗಲೂ ಕೂಡ ತ್ರಿವಿಕ್ರಮ ದೇವರ ಮುಂಭಾಗದಲ್ಲಿ ಶಿಲಾಮಯವಾದ ಶೋಭಿಸುವ ಹಂಸಾರೂಢ ವಾದಿರಾಜರ ಮೂರ್ತಿಯು (ಧ್ವಜಸ್ತಂಭದಲ್ಲಿ) ಚೆನ್ನಾಗಿ ಕಾಣುತ್ತದೆ.

**ಶ್ಲೋಕ:–** **ಅಸ್ಮದ್ಗುರೌ ವೇದನಿಧೌ ಪ್ರಸಾದೋ ವಾದಿರಾಣ್ಮುನೇಃ ।**
**ಕಿಂ ವಕ್ತವ್ಯೋ ಯತೋಽಸ್ಮಾಭಿಃ ಪ್ರತ್ಯಕ್ಷೀಕೃತ ಏವ ಯತ್ ॥ ೧೬ ॥**

**ಅರ್ಥ:–** ಪ್ರತ್ಯಕ್ಷವಾಗಿ ನೋಡಿದ ನನಗೆ ನನ್ನ ಗುರುಗಳಾದ ವೇದನಿಧಿಗಳ ಮೇಲೆ ವಾದಿರಾಜ ಮುನಿಗಳ ಅನುಗ್ರಹವು ಎಷ್ಟಿದೆ ಎಂದು ಏನು ಹೇಳಲಿ ? (ಅಂದರೆ ವರ್ಣಿಸಲಸಾಧ್ಯವಾದಷ್ಟು ಅನುಗ್ರಹವು ಇತ್ತೆಂದು ಭಾವ)

**ಶ್ಲೋಕ:–** **ಏಡಮೂಕಂ ದ್ವಿಜಂ ಸ್ವಪ್ನೇ ಬೋಧಯನ್ನಾತ್ಮವೃತ್ತಕಮ್ ।**
**ಶ್ರೀಮದ್ವೃಂದಾವನಾಖ್ಯಾನಂ ಪಠತಾಂ ಸರ್ವಸಿದ್ಧಿದಮ್ ॥ ೧೭ ॥**
**ತೋಷಯನ್ ಸಜ್ಜನಮನಃ ಸ್ವಮಹಾತ್ಮ್ಯಾವಬೋಧಕಮ್ ।**
**ಮಂತ್ರತುಲ್ಯಂ ಮಹಾಗ್ರಂಥಂ ರಚಯಾಮಾಸ ವಾದಿರಾಟ್ ॥ ೧೮ ॥**

ಅರ್ಥ :– ಕಿವುಡ ಮತ್ತು ಮೂಕ ಬ್ರಾಹ್ಮಣನಿಗೆ ಸ್ವಪ್ನದಲ್ಲಿ ಆತ್ಮವೃತ್ತಾಂತವನ್ನು ಬೋಧಿಸುತ್ತಾ ಪಠಿಸುವವರಿಗೆ ಸರ್ವಾಭೀಷ್ಟವನ್ನು ಕೊಡುವ, ಸಜ್ಜನರ ಮನಸ್ಸನ್ನು ಸಂತೋಷಪಡಿಸುವ ತಮ್ಮ ಮಹಾತ್ಮೆಯನ್ನು ತಿಳಿಸುವ, ಮಂತ್ರತುಲ್ಯವಾದ ಶ್ರೀ ಮದ್ವೃಂದಾವನಾಖ್ಯಾನವೆಂಬ ಮಹಾಗ್ರಂಥವನ್ನು ವಾದಿರಾಜರು ರಚಿಸಿದರು.

**ಶ್ಲೋಕ:– ಪ್ರಾತಸ್ತದ್ವದನಾಚ್ಚಿತ್ರಂ ನಿಸ್ಸೃತಂ ಗುರುರಾಣ್ಮಮ ।**
**ಶ್ರೀವೇದನಿಧಿರಾಕರ್ಣ್ಯ ಲೇಖಯಾಮಾಸ ಮತ್ಕರಾತ್ ॥ ೧೯ ॥**

**ಅರ್ಥ:–** ಪ್ರಾತಃಕಾಲದಲ್ಲಿ ಆಶ್ಚರ್ಯಕರವಾಗಿ (ಏಡಮೂಕ ವಿಪ್ರನ) ಮುಖದಿಂದ ಹೋರಬರುತ್ತಿದ್ದ (ಆಖ್ಯಾನ ಶ್ಲೋಕಗಳನ್ನು) ನನ್ನ ಗುರುಗಳಾದ ವೇದನಿಧಿಗಳು ಕೇಳಿ (ಅದನ್ನು) ನನ್ನ ಕೈಯಿಂದ ಬರೆಸುತ್ತಿದ್ದರು.

**ಶ್ಲೋಕ:– ಸ್ವಪ್ನಜ್ಞಾತಂ ಗುರುಪ್ರೋಕ್ತಂ ಪ್ರಭಾತೇ ಕೀರ್ತಯನ್ ಜಡಃ ।**
**ತತಃ ಪರಂ ಮೂಕ ಏವ ಸಾಕ್ಷೀ ಚಾಹಂ ಚ ಮೇ ಗುರುಃ ॥ ೨೦ ॥**

**ಅರ್ಥ:–** ಗುರುಗಳು ಹೇಳಿ ಸ್ವಪ್ನದಲ್ಲಿ ಕೇಳಿದುದನ್ನು ಜಡ ಸದೃಶ್ಯನಾದ (ಏಡ ಮೂಕ ವಿಪ್ರನು) ಬೆಳಿಗ್ಗೆ (ವೇದನಿಧಿಗಳಮುಂದೆ) ಹೇಳುತ್ತಿದ್ದುದ್ದು. ನಂತರದಲ್ಲಿ ಮೂಕನೇ ಆಗುತ್ತಿದ್ದನು. ಇದಕ್ಕೆ ನಾನು ಮತ್ತು ನನ್ನ ಗುರುಗಳೇ ಸಾಕ್ಷಿ.

**ಶ್ಲೋಕ:– ಅಣುವೃಂದಾವನಾಖ್ಯಾನಂ ಶ್ರೀವೇದನಿಧಿಸದ್ಗುರುಃ ।**
**ಸ್ವಾಪ್ನವೃಂದಾವನಾಖ್ಯಾನಾತ್ಸಂಗೃಹ್ಯಾಲೇಖ್ಯ ಭಕ್ತಿತಃ ॥ ೨೧ ॥**
**ಲೇಖಯಿತ್ವಾ ಶಿಲಾಯಾಂ ಸ ವೃಂದಾವನತಟೇ ಬಹಿಃ ।**
**ಸ್ಥಾಪಯಾಮಾಸ ಭಕ್ತಾನಾಂ ನಿರಂತರಜಪಾಯ ಹಿ ॥ ೨೨ ॥**

**ಅರ್ಥ:–** ಸ್ವಾಪ್ನ ವೃಂದಾವನಾಖ್ಯಾನದಿಂದ (೧೫ ಶ್ಲೋಕಗಳನ್ನು) ಸಂಗ್ರಹಿಸಿ (ತಮ್ಮ ಮೂರು ಶ್ಲೋಕಗಳಿಂದ) ಭಕ್ತಿಯಿಂದ ಬರೆದ ಅಣುವೃಂದಾವನಾಖ್ಯಾನವನ್ನು ಶ್ರೀ ವೇದನಿಧಿ ಸದ್ಗುರುಗಳು ಶಿಲೆಯಲ್ಲಿ ಕೆತ್ತಿಸಿ ವಾದಿರಾಜರ ವೃಂದಾವನದ ಸಮೀಪದಲ್ಲಿ ಹೊರಭಾಗದಲ್ಲಿ ಭಕ್ತರುಗಳು ನಿರಂತರವಾಗಿ ಪಠಿಸುವ ಸಲುವಾಗಿ ಸ್ಥಾಪಿಸಿದರು.

**ಶ್ಲೋಕ:– ರಘುನಾಥಾಚಾರ್ಯನಾಮ್ನಾ ವಾದಿರಾಜಗುರೋಃ ಪುರಾ ।**
**ಶಿಷ್ಯೇಣ ರಚಿತೋ ಭಾತಿ ವೃತ್ತರತ್ನಸುಸಂಗ್ರಹಃ ॥ ೨೩ ॥**

**ಅರ್ಥ:–** ವಾದಿರಾಜಗುರುಗಳ ಶಿಷ್ಯ ರಘುನಾಥಾಚಾರ್ಯರೆಂಬ ಹೆಸರಿನವರು ಹಿಂದೆ ರಚಿಸಿದ "ವೃತ್ತರತ್ನ ಸಂಗ್ರಹ" ಎಂಬ ಗ್ರಂಥವು ಪ್ರಸಿದ್ಧವಾಗಿದೆ.

**ಶ್ಲೋಕ:– ಯತ್ರ ರತ್ನಾಭವೃತ್ತಾನಿ ವರ್ಣಿತಾನಿ ಸಭಕ್ತಿಕಮ್ ।**
**ಅವತಾರಕೃತಾನ್ಯದ್ಧಾ ವಾದಿರಾಜಮಹಾಮುನೇಃ ॥ ೨೪ ॥**

**ಅರ್ಥ:–** ಅದರಲ್ಲಿ ವಾದಿರಾಜ ಮುನಿಗಳ ಅವತಾರ ಕಾಲದ ಕಾರ್ಯಗಳು ರತ್ನಗಳ ಪ್ರಕಾಶದಂತೆ, ವರ್ಣಗಳ ಜೋಡಣೆಯಿಂದ ಭಕ್ತಿಯಿಂದ ಚೆನ್ನಾಗಿ ವರ್ಣಿತವಾಗಿವೆ.

**ಶ್ಲೋಕ:– ಸ್ವಾಪ್ನವೃಂದಾವನಾಖ್ಯಾನಂ ದಿವ್ಯಾದ್ಭುತಕಥಾಶ್ರಯಮ್ ।**
**ಪಠತಾಂ ಶೃಣ್ವತಾಂ ಚೈವ ಕಾಮಿತಪ್ರದಮಂಜಸಾ ॥ ೨೫ ॥**

**ಅರ್ಥ:–** ದಿವ್ಯವೂ ಅದ್ಭುತವೂ ಆದ ಕಥಾವಸ್ತುವನ್ನೊಳಗೊಂಡ ಸ್ವಾಪ್ನ ವೃಂದಾವನಾಖ್ಯಾನವು ಪಠಿಸುವವರಿಗೆ ಹಾಗೂ ಕೇಳುವವರಿಗೆ ಇಷ್ಟಾರ್ಥವನ್ನು ಕೊಡುತ್ತದೆ.

**ಶ್ಲೋಕ:– ಭೂತರಾಜಾವೇಕ್ಷಣಂ ಪ್ರಾಕ್ ಫಲದ್ವಯನಿವೇದನಮ್ ।**
**ತ್ರಿವಿಕ್ರಮಾವೇಕ್ಷಣಂ ಚ ಗಂಗಾಪಂಚಕಸೇವನಮ್ ॥ ೨೬ ॥**
**ಪಂಚವೃಂದಾವನಸ್ಯಾತ್ರ ಭಜನಂ ವ್ಯಾಸದರ್ಶನಮ್ ।**
**ಸ್ವಾಪ್ನವೃಂದಾವನಾಖ್ಯಾನಪಠನಂ ಸರ್ವಕಾಮದಮ್ ॥ ೨೭ ॥**

**ಅರ್ಥ:–** ಮೊದಲು ಭೂತರಾಜರ ದರ್ಶನಮಾಡಿ ಎರಡು ತೆಂಗಿನಕಾಯಿಗಳ ಅರ್ಪಣೆ, ತ್ರಿವಿಕ್ರಮದೇವರದರ್ಶನ ಮತ್ತು ಪಂಚಗಂಗಾಸೇವನೆ, ಪಂಚವೃಂದಾವನದ ಸೇವೆ, ವೇದ ವ್ಯಾಸರ ದರ್ಶನ. ಸ್ವಾಪ್ನ ವೃಂದಾವನಾಖ್ಯಾನದ ಪಾರಾಯಣ ಇವು ಸರ್ವಾಭೀಷ್ಟಗಳನ್ನು ಕೊಡುವವು.

**ಶ್ಲೋಕ:– ಯೇ ಪುತ್ರಧನಧಾನ್ಯಾದಿವೃದ್ಧಿಕಾಮಾಃ ಕಲೌಯುಗೇ ।**
**ರೋಗಗ್ರಹಪಿಶಾಚಾದಿಬಾಧಾನಾಶಸಮುತ್ಸುಕಾಃ ॥ ೨೮ ॥**

**ತೇ ಪ್ರಾತಃ ಶುದ್ಧಗಂಗಾಯಾಂ ಸ್ನಾತಾಃ ಸದ್ಗುರುಸೇವಕಾಃ ।**
**ವ್ಯಾಸಂ ತ್ರಿವಿಕ್ರಮಂ ಚೈವ ಪಂಚವೃಂದಾವನಂ ಗುರೋಃ ॥ ೨೯ ॥**
**ಅಶ್ವತ್ಥಂ ಚ ಹನೂಮಂತಂ ವೇಣುಗೋಪಾಲಕಂ ಶಿವಮ್ ।**
**ಪ್ರದಕ್ಷಿಣೀಕೃತ್ಯ ಪುನಃ ಪ್ರಣಮ್ಯ ಚ ಸಮಾದರಾತ್ ॥ ೩೦ ॥**
**ಅಷ್ಟೋತ್ತರಶತಂ ವಾಪಿ ತದರ್ಧಂ ವಾ ತದರ್ಧತಃ ।**
**ಅಷ್ಟಚತ್ವಾರಿಂಶದಹಸ್ತದರ್ಧದಿನಸಂಖ್ಯಯಾ ॥ ೩೧ ॥**
**ಸ್ನಾನಂ ಪ್ರದಕ್ಷಿಣಂ ಚೈವ ವಂದನಂ ಸ್ತವನಂ ಕ್ರಮಾತ್ ।**
**ಕುರ್ವಂತೋ ಗುರುಸೇವಾಂ ಹಿ ಗುರ್ವರ್ಪಿತಸುಭೋಜಿನಃ ॥ ೩೨ ॥**

**ಅರ್ಥ:–** ಕಲಿಯುಗದಲ್ಲಿ ಪುತ್ರಧನ ಧಾನ್ಯಾದಿಗಳನ್ನಿಚ್ಛಿಸುವ, ರೋಗ ಗ್ರಹಪೀಡಾದಿಗಳ ಬಾಧೆಯನಾಶವನ್ನಿಚ್ಛಿಸುವ ಸಮಸ್ತ ಭಕ್ತರುಗಳು. ಪ್ರಾತಃ ಕಾಲದಲ್ಲಿ ಧವಳ ಗಂಗೆಯಲ್ಲಿ ಸ್ನಾನ ಮಾಡಿ, ವೇದವ್ಯಾಸ, ತ್ರಿವಿಕ್ರಮ, ಗುರುಗಳ ಪಂಚವೃಂದಾವನ, ಅಶ್ವತ್ಥ, ಹನುಮಂತ ವೇಣುಗೋಪಾಲ ಮತ್ತು ರುದ್ರದೇವರು ಇವರುಗಳ ಪ್ರದಕ್ಷಿಣೆ ಮಾಡಿ ಮತ್ತು ನಮಸ್ಕರಿಸಿ ಪುನಃ ಭಕ್ತಿಯಿಂದ ನೂರೆಂಟು ಅಥವಾ ಅದರ ಅರ್ಧ, ಅಥವಾ ಅದರ ಅರ್ಧಸಂಖ್ಯೆಯಿಂದ ಕ್ರಮವಾಗಿ ಸ್ನಾನ, ಪ್ರದಕ್ಷಿಣೆ, ನಮಸ್ಕಾರ ಸ್ತೋತ್ರಗಳನ್ನು ನಲವತ್ತೆಂಟು ಅದರ ಅರ್ಧ (ಅಂದರೆ ಇಪ್ಪತ್ತು ನಾಲ್ಕು ದಿನಗಳಕಾಲ) ಗುರುಸೇವೆಯನ್ನು ಮಾಡುತ್ತಾ ಗುರ್ವರ್ಪಿತ ಪ್ರಸಾದವನ್ನು ಸ್ವೀಕರಿಸಬೇಕು.

**ಶ್ಲೋಕ:–** **ಇಷ್ಟಾರ್ಥಸೂಚನಾಂ ಲಬ್ಧ್ವಾ ಗುರ್ವನುಗ್ರಹಮಾಪ್ಯ ಚ ।**
**ಸೇವಾಫಲಂ ಲಭಂತೇಽದ್ಧಾ ಕಾಮಧೇನುರ್ಯತೋ ಗುರುಃ ॥ ೩೩ ॥**

**ಅರ್ಥ:–** (ಹಿಂದೆ ತಿಳಿಸಿದಂತೆ ಸೇವೆ ಮಾಡಿದರು) ಗುರುಗಳ ಅನುಗ್ರಹವನ್ನು ಸಂಪಾದಿಸಿ. (ಸ್ವಾಪ್ನಾದಿಗಳ ಮೂಲಕ) ಇಷ್ಟಾರ್ಥ ಸೂಚಿತರಾಗಿ. ಕಾಮಧೇನುವಿನಂತಿರುವ ಗುರುಗಳಿಂದ ಸೇವಾಫಲವನ್ನು ಪಡೆಯುತ್ತಾರೆ.

**ಶ್ಲೋಕ:–** **ಆಕಾಶಗಂಗಾಽಮೃತಗಂಗಯಾ ಚ**
**ಪಾತಾಲಗಂಗಾಂಽತರಗಂಗಯಾ ಚ ।**
**ಸಾರ್ಧಂ ಚಕಾಸ್ತೋಽತ್ರ ಪವಿತ್ರಪುರ್ಯಾಂ**
**ಕಃ ಶಕ್ನುಯಾತ್ ಸ್ತೋತುಮಿಮಾಂ ಹಿ ಸೋದಾಮ್ ॥ ೩೪ ॥**

**ಅರ್ಥ:–** ಪವಿತ್ರವಾದ ಈ ಸೋದಾಪಟ್ಟಣವು (ತ್ರಿವಿಕ್ರಮ ದೇವಾಲಯದಲ್ಲಿರುವ) ಆಕಾಶಗಂಗಾ ಎನ್ನುವ ಅಮೃತಗಂಗೆಯಿಂದಲೂ, ಮತ್ತು ಮಠದ ಪಶ್ಚಿಮ ಭಾಗದಲ್ಲಿರುವ) ಪಾತಾಳಗಂಗಾ ಎನ್ನುವ ಅಂತರ ಗಂಗೆಯಿಂದಲೂ ಸಹಿತವಾಗಿ ಶೋಭಿಸುತ್ತಿದೆ. ಇದನ್ನೂ ಸ್ತೋತ್ರಮಾಡಲು ಯಾರು ಶಕ್ತರಾದಾರು ?

**ಶ್ಲೋಕ:–** **ಜಯತಿ ಧವಲಗಂಗಾ ಜಾಹ್ನವೀಸನ್ನಿಧಾನಾ**
**ದಘನಿಚಯನಿಹಂತ್ರೀ ಪಂಚವೃಂದಾವನಂ ಚ ।**
**ಭಜಕ ಶುಭಕರಂ ಶ್ರೀ ವಿಷ್ಣುವಾಯು ಪ್ರತೀಕೈಃ**
**ಲಸಿತಮುತ ಬತ ಶ್ರೀ ವಾದಿರಾಡರ್ಚಯಾ ಚ ॥ ೩೫ ॥**

**ಅರ್ಥ:–** ಗಂಗಾ ಸನ್ನಿಧಾನದಿಂದ ಪಾಪಗಳ ಸಮೂಹವನ್ನು ನಾಶಮಾಡುವ ಧವಳಗಂಗೆಯು ಉತ್ಕೃಷ್ಟಳಾಗಿದ್ದಾಳೆ. ಮತ್ತು ಶ್ರೀ ವಿಷ್ಣು ವಾಯುಗಳ ಮೂರ್ತಿಗಳಿಂದಲೂ ಶ್ರೀ ವಾದಿರಾಜರ ಪ್ರತಿಮೆಯಿಂದಲೂ ಶೋಭಿಸುವ, ಸೇವಿಸುವವರಿಗೆ ಶುಭವನ್ನೀಯುವ ಪಂಚಮ್ರುಂದಾವನವು ಉತ್ಕೃಷ್ಟ ವಾಗಿದೆ.

**ಶ್ಲೋಕ:–** **ಇತಿ ಶ್ರೀ ವೇದನಿಧಿತೀರ್ಥಂತೇವಾಸಿ ಶ್ರೀ ರಾಮಚಂದ್ರಾಚಾರ್ಯವಿರಚಿತೇ**
**ಶ್ರೀ ವಾದಿರಾಜಗುರುವರಚರಿತಾಮೃತೇ ಸಪ್ತಮಬಿಂದುಃ ಸಮಾಪ್ತಃ ।**

ಇಲ್ಲಿಗೆ ಶ್ರೀ ವೇದನಿಧಿತೀರ್ಥರ ವಿದ್ಯಾಶಿಷ್ಯರಾದ ರಾಮಚಂದ್ರಾರ್ಯ ರಿಂದ ವಿರಚಿತವಾದ ಶ್ರೀ ವಾದಿರಾಜ ಗುರುವರ ಚರಿತಾಮೃತದಲ್ಲಿ ಏಳನೆಯ ಬಿಂದುವು ಮುಗಿಯಿತು.

## ॥ ಅಷ್ಟಮ ಬಿಂದುಃ ॥

**ಶ್ಲೋಕ:–** **ಬಿಂದಾವಸ್ಮಿನ್ ವಾದಿರಾಜ ಋಜುರ್ಜೀವೋತ್ತಮಸ್ತ್ವಿತಿ ।**
**ಪ್ರಮಾಣೈಸ್ಸಾಧ್ಯತೇ ವೇದನಿಧ್ಯಾರ್ಯಾಜ್ಞಾಬಲಾನ್ಮಯಾ ॥ ೧ ॥**

**ಅರ್ಥ:–** ಈ ಅಧ್ಯಾಯದಲ್ಲಿ ವೇದನಿಧಿಯತಿಗಳ ಆಜ್ಞಾಬಲದಿಂದ ವಾದಿರಾಜರು ಜೀವೋತ್ತಮರಾದ ಋಜುಗಳು ಎಂದು ನನ್ನಿಂದ ಪ್ರಮಾಣಪೂರ್ವಕವಾಗಿ ಸಾಧಿಸಲ್ಪಡುತ್ತದೆ.

**ಶ್ಲೋಕ:–** **"ಗುಹ್ಯಾದೇಶಾ ಬ್ರಹ್ಮಪದೇ ಯೇ ಯೋಗ್ಯಾ ದೇವತಾಗಣಾಃ ।**
**ಸರ್ವೇ ಗುಹ್ಯೋಪದೇಷ್ಟಾರಃ ಸರ್ವೇಷಾಂ ಗುರವೋ ಹಿ ತೇ"**
**ಇತಿ ಛಾಂದೋಗ್ಯಭಾಷ್ಯೋಕ್ತಪ್ರಮಾಣಾತ್ಸಿದ್ಧ್ಯತೇ ಗಣಃ ।**
**ರುದ್ರಾದೀನಾಂ ತತ್ವಬೋಧಕಾರಣಂ ಕೀರ್ತಿತೋಽಂಜಸಾ ॥ ೨ ॥ಅರ್ಥ:–** "ಬ್ರಹ್ಮಪದವಿಗೆ ಯೋಗ್ಯವಾದ ದೇವತಾಗಣವು (ರುದ್ರಾದಿಗಳಿಗೆ) ಗೌಪ್ಯತತ್ವಗಳನ್ನು ಉಪದೇಶಿಸುವರು (ಹಾಗೆ ಉಪದೇಶ ಮಾಡುವ ಮಾಡುವರಾದ್ದರಿಂದ ಅವರು) ಗುಹ್ಯಾದೇಶರು (ಎಂದೆನಿಸುವರು) ಅವರು ಎಲ್ಲರಿಗೂ ಗುರುಗಳು"

ಹೀಗೆ ಛಾಂದೋಗ್ಯ ಭಾಷ್ಯೋದಲ್ಲಿ ಉಕ್ತವಾದ ಪ್ರಮಾಣದಿಂದ ಸಿದ್ಧವಾಗುತ್ತದೆ. ರುದ್ರಾದಿಗಳಿಗೆ ತತ್ವವನ್ನು ಬೋಧಿಸುವರಾದ ಕಾರಣ ಅವರು ಚನ್ನಾಗಿ ಸ್ತುತಿಸಲ್ಪಟ್ಟಿದ್ದಾರೆ.

**ಶ್ಲೋಕ:–** **"ಬ್ರಹ್ಮತ್ವಯೋಗ್ಯಾ ಋಜುವೋ ನಾಮ ದೇವಾಃ ಪೃಥಗ್ಗಣಾಃ ।**
**ತೈರೇವಾಪ್ಯಂ ತತ್ವದಂ ತು ನೈವಾನ್ಯೈಃ ಸಾಧನೈರಪಿ ।"**
ಇತಿ ನಿರ್ಣಯಸಂಪ್ರೋಕ್ತಪ್ರಮಾಣಾದೃಜುನಾಮಕಾಃ ।
**ಬ್ರಹ್ಮತ್ವಯೋಗ್ಯಾ ಇತ್ಯೇವ ಸಾಧಿತಾ ಸಾಧುತುಷ್ಟಯೇ ॥ ೩ ॥**

**ಅರ್ಥ:–** ಬ್ರಹ್ಮಪದವಿಗೆ ಯೋಗ್ಯವಾದ ಋಜುಗಳು ಎಂಬ ಹೆಸರಿನ ಪ್ರತ್ಯೇಕ ದೇವತೆಗಳ ಸಮೂಹವಿದೆ. ಆ ಗಣದವರು ಮಾತ್ರ ಆ ಪದವಿ ಹೊಂದಲು ಸಾಧ್ಯ, ಇತರರಿಂದ ಸಾಧನೆ ಮಾಡಿದರೂ ಕೂಡ ಆ ಪದವಿಯನ್ನು ಹೊಂದಲು ಸಾಧ್ಯವಿಲ್ಲ.

ಈ ರೀತಿಯಾಗಿ ನಿರ್ಣಯದಲ್ಲಿ ಹೇಳಿದ ಪ್ರಮಾಣದಿಂದ ಋಜುಗಳು ಎಂಬ ಹೆಸರಿನವರು ಬ್ರಹ್ಮಪದವಿಯೋಗ್ಯರು ಎಂದು ಸಜ್ಜನರ ಸಂತೋಷಕ್ಕಾಗಿ ಸಾಧಿಸಲ್ಪಟ್ಟಿತು.

**ಶ್ಲೋಕ:–** **"ಕಲ್ಕೀ ಸುತೇಜಾ ದಾಸಶ್ಚ ಧರ್ಮಶ್ಚಾಧರ್ಮಖಂಡನಃ ।**
**ವರ್ಚಸ್ವೀ ಋಷಣಶ್ಚೈವ ಸಾಧುಶ್ಚೈವ ಮಹೀಪತಿಃ ।**
**ಧರ್ಮಶ್ಚ ಧರ್ಮಜಶ್ಚೈವ ಸಂಪೂರ್ಣಃ ಶುಚಿವೈಕೃತೌ ।**
**ಅಂಜನಃ ಸರ್ಷಪಶ್ಚೈವ ಖರ್ಪಟಶ್ಚ ತಥೈವ ಚ ।**
**ಶ್ರದ್ಧಾಲುಶ್ಚೈವ ಸದ್ಧ್ಯಾನೋ ಜ್ಞಾನೋ ವಿಜ್ಞಾನ ಏವ ಚ ।**
**ಕೀರ್ತನಶ್ಚೈವ ಸಂಕೀರ್ಣಃ ಕತ್ಥನಶ್ಚ ತಥೈವ ಚ ।**
**ಮಹಾಬುದ್ಧಿರ್ಜಯಶ್ಚೈವ ತಥೈವ ಚ ಮಹತ್ತರಃ ।**
**ಸುವೀರ್ಯಶ್ಚೈವ ಮೇಧಾವೀ ವಿಜಯೋ ಜಯ ಏವ ಚ ।**
**ಮನುರ್ಮೋದಃ ಪ್ರಮೋದಶ್ಚಸಂತ ಆನಂದ ಏವ ಚ ।**
**ಸಂತುಷ್ಟಶ್ಚೈವ ಚಾರ್ವಂಗಸ್ತಥಾ ಚಾರುಸುಬಾಹುಕಃ ।**
**ತಥಾ ಚಾರುಪದಶ್ಚಾಪಿ ತಥೈವಚ ಸುಲೋಚನಃ ।**
**ಸಾರಸ್ವತಃ ಸುವೀರಶ್ಚ ಪ್ರಾಜ್ಞಃ ಕಪಿಸ ಏವ ಚ ।**
**ಲಂಪಟಶ್ಚೈವ ಸರ್ವಜ್ಞಃ ಸರ್ವಜಿನ್ಮಿತ್ರ ಏವ ಚ ।**
**ತಥಾ ಪಾಪವಿನಾಶಶ್ಚ ಏತೇ ಪಂಚಾಶದೀರಿತಾಃ ।**
**ತಥಾ ಧರ್ಮೋವಿನೀತಶ್ಚ ಶಾರದೋಜಾಸ್ತಥೈವ ಚ ।**
**ಸುತಪಸ್ಕಶ್ಚ ತೇಜಸ್ವೀ ದಾನಶೀಲಸ್ತಥೈವ ಚ ।**
**ಸುಶೀಲಶ್ಚೈವ ಯಜ್ಞಶ್ಚ ಸುಕರ್ತಾ ಚ ತಥೈವ ಚ ।**
**ಯಾಗವರ್ತಕಯಜ್ವೀ ಚ ಪ್ರಾಣಶ್ಚಾಪಿ ತಥೈವ ಚ ।**
**ತಥಾ ತ್ರಾಣಶ್ಚಾಮ ಋಷಿರುಪದೇಷ್ಟಾ ತಥೈವ ಚ ।**
**ತಾರಕಶ್ಚ ತಥಾ ಕಾಲಕ್ರೀಡನಶ್ಚ ತಥೈವ ಚ ।**
**ಸುಕಾರ್ತಾ ಚ ಸುಕಾಲಜ್ಞಃ ಕಾಲಸೂಚಕ ಏವ ಚ ।**
**ತಥಾ ಚ ಕಲಿಸಂಹರ್ತಾ ಕಲಿಃ ಕಾಲಸ್ತಥೈವ ಚ ।**
**ಸ್ವಾಮರೇತಃ ಸದಾರತಸ್ತತಶ್ಚ ಸುಬಲಸ್ತಥಾ ।**
**ಸಹಃ ಸದಾಕಪಿಶ್ಚೈವ ಗಮ್ಯೋ ಜ್ಞಾನಸ್ತಥೈವ ಚ ।**
**ತಥೈವ ಸ್ಯಾದ್ಧಶಕಲಃ ಶ್ರೋತವ್ಯಶ್ಚ ತಥೈವ ಚ ।**
**ಸಂಕೀರ್ತಿತವ್ಯೋ ಮಂತವ್ಯಃ ಕವ್ಯೋ ದ್ರಷ್ಟವ್ಯ ಏವ ಚ ।**

**ತಥಾ ಸಖ್ಯಶ್ಚ ಗಂತವ್ಯಃ ಕ್ರವ್ಯಃ ಸ್ಮರ್ತವ್ಯ ಏವ ಚ ।**
**ಸೇವ್ಯಃ ಸುಭಾವ್ಯಃ ಸ್ವರ್ಗವ್ಯೋ ಭಾವ್ಯೋ ಜ್ಞಾತವ್ಯ ಏವ ಚ ।**
**ವಕ್ತವ್ಯಶ್ಚೈವ ಗವ್ಯಶ್ಚ ಲಾತವ್ಯಶ್ಚ ತಥೈವ ಚ ।**
**ವಾಯುಶ್ಚೈವ ತಥಾ ಬ್ರಹ್ಮೇತ್ಯೇವಂ ಪಂಚಾಶದೀರಿತಾಃ ।**
**ಇತ್ಯೇತಚ್ಛತಕಂ ನಾಮ ಋಜೂನಾಂ ಯಃ ಪಠೇತ್ಸದಾ ।**
**ತೈರ್ದತ್ತಾಂ ಪದವಿಂ ಯಾತಿ ವಾಸುದೇವಾಭಿವೀಕ್ಷಿತಾಮ್ ।"**

೧) ಕಲ್ಕಿ ೨) ಸುತೇಜ ೩) ದಾಸ ೪) ಧರ್ಮ ೫) ಅಧರ್ಮಖಂಡನ ೬)ವರ್ಚಸ್ವಿ ೭) ಖಷಣ ೮) ಸಾಧು ೯) ಮಹೀಪತಿ ೧೦) ಸದ್ಧರ್ಮ ೧೧) ಧರ್ಮಜ ೧೨) ಸಂಪೂರ್ಣ ೧೩) ಶುಚಿ ೧೪) ವೈಕೃತ ೧೫) ಅಂಜನ ೧೬)ಸರ್ಷಪ ೧೭) ಖರ್ಪಟ ೧೮) ಶ್ರದ್ಧಾಲು ೧೯) ಸಧ್ಯಾನ ೨೦) ಜ್ಞಾನ ೨೧) ವಿಜ್ಞಾನ ೨೨) ಕೀರ್ತನ ೨೩) ಸಂಕೀರ್ಣ ೨೪) ಕತ್ಥನ ೨೫) ಮಹಾಬುದ್ಧಿ ೨೬) ಜಯ ೨೭) ಮಹತ್ತ ೨೮) ಸುವೀರ್ಯ ೨೯) ಮೇಧಾವಿ ೩೦) ವಿಜಯ ೩೧) ಜಯ ೩೨) ಮನು ೩೩) ಮೋದ ೩೪) ಪ್ರಮೋದ ೩೫) ಸಂತ ೩೬) ಆನಂದ ೩೭) ಸಂತುಷ್ಟ ೩೮) ಚಾರ್ವಂಗ ೩೯) ಚಾರು ೪೦) ಸುಭಾಹು ೪೧) ಚಾರುಪದ ೪೨) ಸುಲೋಚನ ೪೩) ಸಾರಸ್ವತ ೪೪) ಸುವೀರ ೪೫) ಪ್ರಾಜ್ಞ ೪೬) ಕವಿಸ ೪೭) ಅಲಂಪಟ ೪೮) ಸರ್ವಜ್ಞ ೪೯) ಸರ್ವಜಿತ ೫೦) ಮಿತ್ರ

ಇಲ್ಲಿಗೆ ಐವತ್ತು ಹೆಸರುಗಳು ಹೇಳಲ್ಪಟ್ಟಿತ್ತು

೫೧) ಪಾಪ ವಿನಾಶನ ೫೨) ಧರ್ಮ ೫೩) ವಿನೀತ ೫೪) ಶಾರದೋಜ ೫೫)ಸುತಪ ೫೬) ತೇಜಸ್ವಿ ೫೭) ದಾನಶೀಲ ೫೮) ಸುಶೀಲ ೫೯) ಯಜ್ಞ ೬೦) ಸುಕರ್ತ ೬೧) ಯೋಗ ವರ್ತಕ ಯಜ್ವೀ ೬೨) ಪ್ರಾಣ ೬೩) ತ್ರಾಣ ೬೪) ಅಮಋಷಿ ೬೫) ಉಪ ದೇಷ್ಟ ೬೬) ತಾರಕ ೬೭) ಕಾಲಕ್ರೀಡನ ೬೮) ಸುಕರ್ತ ೬೯) ಸುಕಾಲಜ್ಞ ೭೦) ಕಾಲ ಸೂಚಕ ೭೧) ಕಲಿಸಂಹರ್ತ ೭೨) ಕಲಿ ೭೩) ಕಾಲ ೭೪) ಸ್ವಾಮರೇತ ೭೫) ಸದಾರತ ೭೬) ಸುಬಲ ೭೭) ಸಹ ೭೮) ಸದಾಕಪಿ ೭೯) ಗಮ್ಯ ೮೦) ಜ್ಞಾನ ೮೧) ದಶಕಲ ೮೨) ಶ್ರೋತವ್ಯ ೮೩) ಸಂಕೀರ್ತವ್ಯ ೮೪) ಮಂತವ್ಯ ೮೫) ಕವ್ಯ ೮೬) ದ್ರಷ್ಟವ್ಯ ೮೭) ಸಖ್ಯ ೮೮) ಗಂತವ್ಯ ೮೯) ಕ್ರವ್ಯ ೯೦) ಸ್ಮರ್ತವ್ಯ ೯೧) ಸೇವ್ಯ ೯೨) ಸುಭಾವ್ಯ ೯೩) ಸ್ವರ್ಗವ್ಯ ೯೪) ಭಾವ್ಯ ೯೫) ಜ್ಞಾತವ್ಯ ೯೬) ವಕ್ತವ್ಯ ೯೭) ಗವ್ಯ ೯೮) ಲಾತವ್ಯ ೯೯) ವಾಯು ೧೦೦) ಬ್ರಹ್ಮ

ಹೀಗೆ ಇನ್ನು ಐವತ್ತು ಹೆಸರುಗಳು ಹೇಳಲ್ಪಟ್ಟಿತು.

**ಶ್ಲೋಕ:–** **ಇತ್ಯೇವಮೃಜುದೇವಾನಾಂ ಶತಂ ವಾಮನಸಂಜ್ಞಕಾತ್ ।**
**ಪುರಾಣಾಚ್ಚ ಪ್ರಸಿದ್ಧಂ ತತ್ ಲಾತವ್ಯೋ ಭಾವಿಮಾರುತಃ ॥ ೪ ॥**
**ಮಾರುತೋ ಬ್ರಹ್ಮತಾಮೇತಿ ಹ್ಯೇವಂ ಸಿದ್ಧಂ ನ ಸಂಶಯಃ ।**

**ಅರ್ಥ:–** ಈ ನೂರು ಋಜುದೇವತೆಗಳ ಹೆಸರುಗಳು ವಾಮನ ಪುರಾಣದಲ್ಲಿ ಪ್ರಸಿದ್ಧವಾಗಿದೆ. ಅವರಲ್ಲಿ ಲಾತವ್ಯರೇ ಭಾವೀ ವಾಯುವು, ವಾಯುವೇ ಬ್ರಹ್ಮ ದೇವರು ಹೀಗೆ ಸಿದ್ಧವಾಗಿದೆ ಅದರಲ್ಲಿ ಸಂಶಯವಿಲ್ಲ.

**ಶ್ಲೋಕ:–** **"ಅನಾದಿಕಾಲತಃ ಸರ್ವೇ ದೋಷಹೀನಾ ಗುಣಾಧಿಕಾಃ ।**
**ಋಜೂನಾಮೇಕ ಏವಾಸ್ತಿ ಪರಮೋತ್ಸಾಹವರ್ಜನಮ್ ।"**
**ಇತಿ ಸತ್ತತ್ವಮಾಲಾಯಾಮುಕ್ತವಾಕ್ಯಾದದೋಷತಾ ॥ ೫ ॥**

**ಅರ್ಥ:–** "ಅನಾದಿಕಾಲದಿಂದಲೂ ಎಲ್ಲಾ (ಋಜುಗಳೂ) ದೋಷರಹಿತರು, ಗುಣಾಧಿಕ್ಯವುಳ್ಳವರು ಋಜುಗಳಿಗೆ ಅತ್ಯುತ್ಸಾಹ ವಿಲ್ಲದಿರುವಿಕೆ ಎನ್ನುವುದೊಂದಿದೆ." ಹೀಗೆ ಸತ್ತತ್ವ ಮಾಲಾಗ್ರಂಥದಲ್ಲಿ ಯುಕ್ತವಾದ ವಾಕ್ಯದ ದೆಸೆಯಿಂದ (ಋಜುಗಳು) ದೋಷಹೀನರು.

**ಶ್ಲೋಕ:–** **"ದುರ್ವಿಜ್ಞೇಯಮತಃ ಸರ್ವೈರ್ಭಾರತಂ ತು ಸುರೈರಪಿ ।**
**ಸ್ವಯಂ ವ್ಯಾಸೋ ಹಿ ತದ್ವೇದ ಬ್ರಹ್ಮಾ ವಾ ತತ್ಪ್ರಸಾದತಃ ।"**
**ತಾತ್ಪರ್ಯನಿರ್ಣಯೋಕ್ತಿಶ್ಚೇತ್ಥಂ ಭಾರತತತ್ವಕಮ್ ।**
**ವ್ಯಾಸಬ್ರಹ್ಮೋಭಯಜ್ಞೇಯಂ ಪ್ರಾಹ ತನ್ಮರುದಬ್ರವೀತ್ ।॥ ೬ ॥**

**ಅರ್ಥ:–** "ಮಹಾಭಾರತವು ಸರ್ವರಿಂದಲೂ, ದೇವತೆಗಳಿಂದಲೂ ಕೂಡ ತಿಳಿಯಲಶಕ್ಯವು ಸ್ವಯಂ ವೇದವ್ಯಾಸರು ಹೇಳಿದ್ದಾರೆ. ಅವರ ಪ್ರಸಾದದಿಂದ ಬ್ರಹ್ಮನು ತಿಳಿದಿದ್ದಾನೆ" ಹೀಗೆ ಮಹಾಭಾರತ ತಾತ್ಪರ್ಯ ನಿರ್ಣಯದಲ್ಲಿ ಉಕ್ತವಾಗಿದೆ. ಮಹಾಭಾರತದ ತತ್ವಗಳನ್ನು ವ್ಯಾಸ. ಬ್ರಹ್ಮ ಇವರಿಬ್ಬರು ತಿಳಿದಿರುವರೆಂದು (ಮಧ್ವರೂಪಿ) ವಾಯುದೇವರು ನುಡಿದಿದ್ದಾರೆ.

**ಶ್ಲೋಕ:–** **ಭಾರತಾರ್ಥಸ್ಯ ತಾತ್ಪರ್ಯನಿರ್ಣಯಂ ಮಧ್ವರೂಪಭಾಕ್ ।**
**ಲಕ್ಷಾಂಲಂಕಾರತೋ ವಾದಿರಾಜೋಽಪ್ಯೂಚೇ ತದರ್ಥಕಮ್ ॥ ೭ ॥**
**ವಾದಿರಾಜಸ್ತತೋ ಭಾವಿಬ್ರಹ್ಮಾ ವಾಯುರಿತೀರ್ಯತೇ ।**

**ಅರ್ಥ:–** ಭಾರತಾರ್ಥದ ತಾತ್ಪರ್ಯ ನಿರ್ಣಯವು ಮಧ್ವರೂಪೀ (ವಾಯುವಿನ) ಭಾಗ. ವಾದಿರಾಜರೂ ಕೂಡ ಲಕ್ಷಲಂಕಾರ ಗ್ರಂಥದಲ್ಲಿ ಭಾರತಾರ್ಥವನ್ನು ಹೇಳಿದ್ದಾರೆ. ಆದ್ದರಿಂದ ವಾದಿರಾಜರು ಭಾವೀವಾಯು, ಭಾವೀ ಬ್ರಹ್ಮನೆಂದು ಹೇಳಲ್ಪಡುತ್ತದೆ.

**ಶ್ಲೋಕ:–** **"ಯಾವಜ್ಞಾನಂ ಚಾಸ್ತಿ ಮೇ ವಾಸುದೇವೇ**
**ತಾವಜ್ಞಾನಂ ವಾಯುದೇವಸ್ಯ ಚಾಸ್ತಿ !**
**ಯಾವಜ್ಞಾನಂ ವಾಯುದೇವಸ್ಯ ಚಾಸ್ತಿ**
**ತಾವಜ್ಞಾನಂ ಚಾಸ್ತಿ ವೈ ತದೃಜೂನಾಮ್ ।"**
**ಇತಿ ಗಾರುಡವಾಕ್ಯಾತ್ತು ಋಜೂನಾಂ ಜ್ಞಾನಸಾಮ್ಯಕಮ್ ॥ ೮ ॥**
**ಸಿದ್ಧ್ಯತ್ಯೇವ ತಥಾ ಸ್ವಾಪ್ನವೃಂದಾವನವಚಸ್ತ್ವಿದಮ್ ।**

**ಅರ್ಥ:–** "ವಾಸುದೇವನ ವಿಷಯದಲ್ಲಿ ನನಗೆ (ಬ್ರಹ್ಮನಿಗೆ) ಎಷ್ಟು ಜ್ಞಾನ ವಿದೆಯೋ ಅಷ್ಟು ಜ್ಞಾನ ವಾಯುದೇವನಿಗೂ ಇದೆ. ವಾಯುದೇವರಿಗೆ ಇರುವಷ್ಟು ಜ್ಞಾನ ಎಲ್ಲಾ ಋಜುದೇವತೆಗಳಿಗೂ ಇದೆ." ಈ ಗರುಡ ಪುರಾಣವಾಕ್ಯದಿಂದ ಋಜುಗಳಿಗೆ ಜ್ಞಾನ ಸಾಮ್ಯವು ಸಿದ್ಧವಾಗುತ್ತದೆ. ಹಾಗೆಯೇ ಸ್ವಾಪ್ನವೃಂದಾವನಾಖ್ಯಾನ ವಚನದಿಂದಲೂ ಇದನ್ನು ಸಾಧಿಸಿದ್ದಾರೆ.

**ಶ್ಲೋಕ:–** **ಲಕ್ಷಾಲಂಕಾರಕರಣೇ ವ್ಯಾಸಾಜ್ಞಾಂ ಸಾಧಯತ್ಯಲಮ್ ॥ ೯ ॥**
**"ಪ್ರಯಾಗೇ ಬ್ರಹ್ಮಣಃ ಸಂಧ್ಯಾಮಠೇ ಜಪಪರಾಯಣಃ ।**
**ಅಹಮಾಸಂ ತದಾ ಲಕ್ಷಾಲಂಕಾರಂ ಕುರ್ವಿತಿ ಪ್ರಭುಃ ।"**

**ಅರ್ಥ:–** "ಪ್ರಯಾಗದಲ್ಲಿ ಬ್ರಹ್ಮದೇವರು ಯಾಗ ಮಾಡಿದ ಸ್ಥಳದಲ್ಲಿರುವ, ಸಂಧ್ಯಾಮಠದಲ್ಲಿ ಜಪಮಾಡುತ್ತಿದ್ದೆನು ಆಗ ಪ್ರಭುಗಳಾದ ವೇದವ್ಯಾಸರು ಲಕ್ಷಾಲಂಕಾರಗ್ರಂಥವನ್ನು ರಚಿಸು" ಎಂದು ಲಕ್ಷಾಲಂಕಾರ ಗ್ರಂಥರಚನೆಗೆ ವೇದವ್ಯಾಸರ ಆಜ್ಞೆಯನ್ನು (ತಿಳಿಸುತ್ತಾ ವಾದಿರಾಜರು ತಮಗೂ ವಾಯುದೇವರಿಗೂ ಜ್ಞಾನ ಸಾಮ್ಯ(ವಿರುವುದನ್ನು) ಸಾಧಿಸಿದ್ದಾರೆ. (ಇದರಿಂದ ತಾವು ಋಜುಗಳೆಂದೂ ಸಾಧಿಸಿದಂತಾಯಿತು.)

**ಶ್ಲೋಕ:–** **"ದುರ್ವಾದಿನಃ ಪ್ರಮಥ್ಯಾಶು ಮತ್ಪದಂ ಯಾತುಮರ್ಹತಿ ।**
**ಸ್ಥಾಪಯಿಷ್ಯತಿ ಮಚ್ಛಾಸ್ತ್ರಂ ತೇನ ಮೋಕ್ಷೋ ಭವೇದ್ಧಿ ವಃ ।"**
**ಇತ್ಯೂಚೇ ಬ್ರಹ್ಮವೈವರ್ತಪುರಾಣೇ ಸ್ಪಷ್ಟವಾಕ್ಯತಃ ।**

**ಅರ್ಥ:–** "ದುರ್ವಾದಿಗಳನ್ನು (ಮತ್ತು ಅವರ ದುಃಶಾಸ್ತ್ರಗಳನ್ನು) ವಿನಾಶಗೊಳಿಸಿ ನನ್ನ ಸ್ಥಾನವನ್ನು ಹೊಂದಲು ಅರ್ಹರಾಗಿರುವಿರಿ. ನನ್ನ ಶಾಸ್ತ್ರವನ್ನು (ನಾನು ವಾಯು ಪದವಿಯಲ್ಲಿದ್ದಾಗ ಮಧ್ವರೂಪದಿಂದ ಹೇಳಿದ ಶಾಸ್ತ್ರವನ್ನು ಪುನಃ) ಸ್ಥಾಪಿಸುತ್ತೀರಿ. ಅದರಿಂದ ನಿಮಗೆ ಮೋಕ್ಷವಾಗುವುದು." ಎಂದು ಬ್ರಹ್ಮವೈವರ್ತ ಪುರಾಣದಲ್ಲಿ (ಬ್ರಹ್ಮದೇವರ) ಸ್ಪಷ್ಟವಚನವು (ಶ್ರೀ ವಾದಿರಾಜರನ್ನು ಕುರಿತು ಹೇಳಿರುವುದು) ಉಕ್ತವಾಗಿದೆ.

**ಶ್ಲೋಕ:–** **"ತಂ ಮಧ್ವಂ ಮಾರುತಂ ಸರ್ವೇ ಪರಿವಾರತಯಾ ಸದಾ ।**
**ಸಂಸೇವಿತುಂ ಸುರಾ ಭೂಮಾವವತೇರುರಿತಿ ಶ್ರುತಮ್ ।**
**ತೇ ತು ತಚ್ಛಿಷ್ಯತಾಮಾಪ್ಯ ತನ್ಮತಂ ತು ವ್ಯಘೋಷಯನ್ ।**

**ತೇಷು ಮುಖ್ಯೌ ವಿಷ್ಣುತೀರ್ಥಪದ್ಮನಾಭಾಖ್ಯಯೋಗಿನೌ ।**
**ಅತ್ಯಕ್ತದೇಹಸ್ತತ್ರಾದ್ಯೋ ವರ್ತಯಿಷ್ಯತಿ ತನ್ಮತಮ್ ।**
**ತತ್ಪೂರ್ವಮಸ್ಯ ವಂಶೇ ಚ ಋಜುಸ್ಥೋ ಹಿ ಸುರೇಶ್ವರಃ ।**
**ವಾದಿರಾಜೋ ಯತಿರ್ಭೂತ್ವಾ ಚೈತದ್ವಿಸ್ತಾರಯಿಷ್ಯತಿ ।"**

**ಇತಿ ಪಾದ್ಮಪುರಾಣೋಕ್ತರೂಪ್ಯಪೀಠಸುವರ್ಣನೇ ।**
**ವಾದಿರಾಜಋಜುತ್ವಂ ಹಿ ಸಾಧಿತಂ ಸ್ಫುಟವಾಕ್ಯತಃ ॥ ೧೦ ॥**

**ಅರ್ಥ:–** ಆ ಮಧ್ವರೂಪಿ ವಾಯುವನ್ನು ಸದಾ ಸೇವಿಸಲು ಎಲ್ಲಾ ದೇವತೆಗಳು ಪರಿವಾರ ಸಮೇತರಾಗಿ ಭೂಮಿಯ ಲ್ಲಿ ಅವತರಿಸುವರೆಂದು ಶ್ರುತವಾಗಿದೆ. ಆ ದೇವತೆಗಳು ಅವರ ಶಿಷ್ಯತ್ವವನ್ನು ಹೊಂದಿ ಅವರ ಮತವನ್ನು

ಪ್ರಚಾರಪಡಿಸುತ್ತಾರೆ. ವಿಷ್ಣುತೀರ್ಥರು ಮತ್ತು ಪದ್ಮನಾಭಯತಿಗಳು ಅವರಲ್ಲಿ ಮುಖ್ಯರಾದವರು ಅವರಲ್ಲಿ ಮೊದಲನೆಯವರಾದ ವಿಷ್ಣುತೀರ್ಥರು ಅತ್ಯಕ್ತದೇಹಿಗಳಾಗಿದ್ದು ಆ ಮತವನ್ನು ಭವಿಷ್ಯತ್‌ಕಾಲದಲ್ಲಿಯೂ ಪ್ರಸಾರ ಮಾಡುತ್ತಾರೆ. ಹೀಗೆ ಪ್ರಸಾರ ಮಾಡುವ ಪೂರ್ವದಲ್ಲಿ ಆ ವಿಷ್ಣುತೀರ್ಥರ ವಂಶದಲ್ಲಿ ಋಜಗಣಸ್ಥರೂ ಸುರೇಶ್ವರರೂ ಆದ (ಲಾತವ್ಯರು) ವಾದಿರಾಜಯತಿಗಳಾಗಿ ಅವತರಿಸಿ (ಮಧ್ವಮತವನ್ನು) ವಿಸ್ತರಿಸುತ್ತಾರೆ. ಈ ರೀತಿಯಾಗಿ ಪದ್ಮಪುರಾಣದಲ್ಲಿ ರೂಪ್ಯಪೀಠ ವರ್ಣನೆಯೆಂಬ ಭಾಗದಲ್ಲಿ ವಾದಿರಾಜರ ಋಜುತ್ವವು ಸ್ಪಷ್ಟವಾದ ವಾಕ್ಯಗಳಿಂದ ಸಮರ್ಥಿತವಾಗಿದೆ.

**ಶ್ಲೋಕ:–** **"ಅಪರೋಕ್ಷ ವಿಶೇಷಣ ಸಂಯುತಾ ಬ್ರಹ್ಮ ಪೂರ್ವಕಾಃ ।**
**ಕಲ್ಕ್ಯಂತಾ ಋಜುವಃ ಪ್ರೋಕ್ತಾ ಪ್ರಾರಬ್ಧಫಲಭೋಗಿನಃ ।**
**ಬ್ರಹ್ಮಣೋ ನಾವತಾರೋಽಸ್ತಿ ಶತಮಧ್ಯೇ ಪರಾಜ್ಞಯಾ ।**
**ವಾಯುಮಾರಭ್ಯ ಕಲ್ಕ್ಯಂತಾ ಜನಿಮಂತ್ರೋಽತ್ರ ಭಾರತೇ ।**
**ಹನುಮದ್ಭೀಮಮಧ್ವಾಖ್ಯರೂಪೋ ವಾಯುರ್ಭವಿಷ್ಯತಿ ।**
**ಸ್ವಯಂವರಸಮುದ್ಯೋಗೇ ರುಕ್ಮಿಣೀ ಪತ್ರಮಾದರಾತ್ ।**
**ಕೃಷ್ಣಾಯಾದಾದ್ಗೃಹೀತ್ವಾ ಯೋ ಹ್ಯಂತಃಪುರಗತೋ ದ್ವಿಜಃ ।**
**ಸರ್ವಾದೃಷ್ಟಸ್ತದೈವಾಯಮೃಜುರ್ಲಾತವ್ಯನಾಮಕಃ ।**
**ವಾಯುಸ್ಥಾನಸಮಾರೋಹಯೋಗ್ಯೋಽಯಂ ಯತಿರೂಪವಾನ್ ।**
**ಆಕಲ್ಪಂ ಬ್ರಹ್ಮಣಃ ಕೃಷ್ಣಪ್ರಸಾದಸ್ಯೈಕಭಾಜನಮ್ ।**
**ಕೃಷ್ಣಾರ್ಚಕೋ ಯತಿರ್ಭೂತ್ವಾ ವಾದಿರಾಜೋ ವದಿಷ್ಯತಿ ।**
**ಶ್ರೀ ರುಕ್ಮಿಣೀಶವಿಜಯಂ ಕಲೌ ಕೃಷ್ಣಪ್ರಸಾದಭಾಕ್ ।"**
**ವಾಮನಾದಿಪುರಾಣೋಕ್ತ್ಯಾ ಪ್ರಸಿದ್ಧಂ ವಾದಿರಾಣ್ಮುನೇಃ ।**
**ಋಜುತ್ವಮವತಾರೇಷು ಕೃಷ್ಣಸೇವಾಫಲಂ ಸ್ಫುಟಮ್ ॥ ೧೧ ॥**

**ಅರ್ಥ:–** ಅಪರೋಕ್ಷ ವಿಶೇಷದಿಂದ ಕೂಡಿರುವ ಬ್ರಹ್ಮನಿಂದ ಮೊದಲುಗೊಂಡು ಕಲ್ಕಿ ಪರ್ಯಂತವಾಗಿರುವ ಋಜುಗಳು ಪ್ರಾರಬ್ಧಫಲಭೋಗಿಗಳೆಂದು ಹೇಳಲ್ಪಟ್ಟಿದ್ದಾರೆ. ಈ ನೂರು ಜನರ ಮಧ್ಯದಲ್ಲಿ ಪರಮಾತ್ಮನ ಆಜ್ಞೆಯಿಂದ ಬ್ರಹ್ಮನಿಗೆ ಅವತಾರವಿಲ್ಲ. ವಾಯುವಿನಿಂದ ಪ್ರಾರಂಭಿಸಿ ಕಲ್ಕಿಯವರೆಗಿನವರು ಭಾರತದಲ್ಲಿ ಜನ್ಮ ವುಳ್ಳವರು. ವಾಯು ಹನುಮ ಭೀಮ ಮಧ್ವರೆಂಬ (ಮೂರು) ರೂಪವುಳ್ಳವರಾಗಿರುತ್ತಾರೆ. (ಅಂದರೆ ಆ ಮೂರು ರೂಪಗಳಿಂದ ಅವತರಿಸುತ್ತಾರೆ) ರುಕ್ಮಿಣೀ ಸ್ವಯಂವರಕಾರ್ಯದಲ್ಲಿ ಯಾರಿಗೂ ಕಾಣದಂತೆ ಯಾವ ಬ್ರಾಹ್ಮಣನು ಅಂತಃಪುರಕ್ಕೆ ಹೋಗಿ ಆದರದಿಂದ ರುಕ್ಮಿಣೀ ದೇವಿಯವರ ಪತ್ರವನ್ನು ಕೃಷ್ಣನಿಗೆ ತಂದು ಕೊಟ್ಟನೋ ಅವನು ಲಾತವ್ಯನಾಮಕ ಋಜುವು. ವಾಯುಪದವಿಗೆ ಏರಲು ಯೋಗ್ಯನಾದ ಈ ಋಜುವು ವಾದಿರಾಜನೆಂಬ ಯತಿರೂಪವುಳ್ಳವನಾಗಿ ಕೃಷ್ಣಾರ್ಚಕನಾಗಿ ಬ್ರಹ್ಮಕಲ್ಪ ಪರ್ಯಂತವಾಗಿ ಕೃಷ್ಣ ಪ್ರಸಾದಕ್ಕೆ ಮುಖ್ಯಪಾತ್ರ ನಾಗುತ್ತಾನೆ. ಕೃಷ್ಣ ಪ್ರಸಾದಕ್ಕೆ ಭಾಗಿಯಾಗಿ ಕಲಿಯುಗದಲ್ಲಿ ರುಕ್ಮಿಣೀಶ ವಿಜಯವನ್ನು ಹೇಳುತ್ತಾನೆ. ಹೀಗೆ ಶ್ರೀ ವಾದಿರಾಜ ಮುನಿಗಳ ಋಜುತ್ವವು, ಅವತಾರಗಳಲ್ಲಿ ಕೃಷ್ಣ ಸೇವಾಫಲವೂ ವಾಮನಾದಿ ಪುರಾಣದಿಗಳಲ್ಲಿರುವ ಉಕ್ತಿಗಳಿಂದ ಪ್ರಸಿದ್ಧವಾಗಿದೆ.

ಟಿಪ್ಪಣಿ :– ಮುಂದಿನ ಶ್ಲೋಕಗಳಲ್ಲಿ ಒಳಿತ್ಥಾ ಸೂಕ್ತವನ್ನು ಲಾತವ್ಯ ಪರವಾಗಿ ಅರ್ಥಮಾಡಿ ಹೇಳಿದ್ದಾರೆ.

**ಶ್ಲೋಕ:–** **"ಸಹೋರೂಪಸ್ಯ ದೇವಸ್ಯ ಲಾತವ್ಯಸ್ಯ ಬಲಾತ್ಮಕಮ್ ।**
**ಮೂಲರೂಪಂ ಜ್ಞಾನತತಂ ಜಗದ್ಧರಣಕಂ ಯತಃ ।**
**ಜಾತಂ ತದಾತ್ಮಕಂ ಸರ್ವಚೇಷ್ಟಕೇನ ಮಹಾತ್ಮನಾ ।**
**ರೂಪತ್ರಯಾವತಾರಾಯ ನಿಹಿತಂ ಹರಿಣಾ ಸ್ವಯಮ್ ।**
**ಅಂಡಾದ್ಬಹಿಃ ಸ್ಥಿತಂ ಮೂಲಂ ಸತ್ಯಲೋಕಸ್ಥಿತಂ ಮಹತ್ ।**
**ಗೃಹೀತ್ವಾ ರುಕ್ಮಿಣೀಪತ್ರಂ ಕೃಷ್ಣಾಂತಿಕಮುಪಾಗತಮ್ ।**
**ವಾದಿರಾಜಾಭಿಧಂ ಚೇತಿ ಮೂಲಭೇದವಿವರ್ಜಿತಮ್ ।**
**ತತ್ರ ಪ್ರಥಮಕಂ ರೂಪಂ ವಿಶ್ವರೂಪಾಂತಿಕೇ ಸ್ಥಿತಮ್ ।**
**ಅಮೃತಸ್ರಾವಿಣೀರ್ವಾಚಃ ಪಂಚರಾತ್ರಾದಿನಾಮಿಕಾಃ ।**
**ಋತರೂಪಸ್ಯ ವಿಷ್ಣೋರ್ಹಿ ಔತ್ಕರ್ಷಪ್ರತಿಪಾದಿಕಾಃ ।**
**ಅನಯಂತ ಸ್ವಶಿಷ್ಯೇಷು ದ್ವಿತೀಯಂ ಪೃಕ್ಷನಾಮಕಮ್ ।**
**ಮಾಗಧಾದಿಮಹಾಸೇನಾದುರ್ಮಾನಕ್ಷಯಕಾರಕಮ್ ।**
**ಕೃಷ್ಣದತ್ತವಿಚಿತ್ರಾನ್ನ ಭೋಕ್ತೃ ತತ್ಪ್ರಿಯಮುತ್ತಮಮ್ ।"**

ಇತ್ಥಂ ಬ್ರಹನ್ನಾರದೀಯಪ್ರಮಾಣಾದ್ವಾಯುಸೂಕ್ತಕಮ್ ।
ಬಳಿಥ್ಯೇತ್ಯಾದಿಕಂ ಭಾವಿವಾಯುತ್ರಿತನು ಸಾಧಕಮ್ ॥ ೧೨ ॥

**ಅರ್ಥ:–** ಶತ್ರುವೇಗ ಸಹನ ಸಮರ್ಥರೂಪವಾದ ಲಾತವ್ಯದೇವರ ಮೂಲರೂಪವು ಬಲಾತ್ಮಕವಾದುದು, ವ್ಯಾಪ್ತಜ್ಞಾನವುಳ್ಳದ್ದು ಜಗತ್ತನ್ನು ಪೋಷಿಸುವಂತಹದು ಆ ಮೂಲರೂಪದಿಂದ, ಮೂಲರೂಪದಂತೆ ಬಲಜ್ಞಾನತ್ಮಕವಾದ ರೂಪಗಳು ಹುಟ್ಟಿದವು. ಸರ್ವಚೇಷ್ಟಕನಾದ ಮಹಾತ್ಮನಾದ ಶ್ರೀ ಹರಿಯಿಂದಲೇ ಸ್ವತಃ ರೂಪತ್ರಯಗಳು ಅವತಾರಕ್ಕಾಗಿ ಅನುಗ್ರಹಿಸಿ ಕೊಡಲ್ಪಟ್ಟಿವೆ. ಮೂಲವು ಬ್ರಹ್ಮಾಂಡದ ಹೊರಗೆ ಸ್ಥಿತವಾಗಿದೆ. ಜಗತ್ಪೂಜ್ಯ ರೂಪವು ಸತ್ಯಲೋಕದಲ್ಲಿ ಸ್ಥಿತವಾಗಿದೆ. (ಎರಡನೆ ರೂಪವು) ರುಕ್ಮಿಣಿಯಿಂದ ಪತ್ರವನ್ನು ತೆಗೆದುಕೊಂಡು ಶ್ರೀ ಕೃಷ್ಣನ ಬಳಿ ಹೋಯಿತು. (ಮೂರನೆಯ ರೂಪವು) ವಾದಿರಾಜನೆಂಬ ಹೆಸರನ್ನುಳ್ಳದ್ದು. ಹೀಗೆ ಮೂಲರೂಪದಿಂದ ಭೇದವಿಲ್ಲದ ಅವತಾರ ರೂಪಗಳು. ಅದರಲ್ಲಿ ಮೊದಲನೆಯ ರೂಪವು ವಿಶ್ವರೂಪಿಯಾದ ಪರಮಾತ್ಮನ ಸಮೀಪದಲ್ಲಿರುವುದು. ಸತ್ಯರೂಪನಾದ ಶ್ರೀವಿಷ್ಣುವಿನ ಸರ್ವೋತ್ತಮತ್ವ ಪ್ರತಿಪಾದಕ ಪಂಚರಾತ್ರಾದಿಗಳಲ್ಲಿರುವ ಅಮೃತ ಸ್ರವಿಸುವ ವಾಕ್ಯಗಳನ್ನು ತನ್ನ ಶಿಷ್ಯರಿಗೆ ಮುಟ್ಟಿಸಿತು. ಎರಡನೆಯ ರೂಪವು ಪೃಕ್ಷ (ಪೃಕ್ಷ ಬಹು ಸೈನ್ಯವನ್ನು ನಾಶ ಮಾಡುವವನೆಂದು ಅರ್ಥ) ವೆಂಬ ಹೆಸರುಳ್ಳದ್ದು ದುರಾಭಿಮಾನಿಗಳಾದ ಜರಾಸಂಧಾದಿಗಳ ನಾಶಕ್ಕೆ ಕಾರಣವಾಯಿತು. ಕೃಷ್ಣನು ಕೊಟ್ಟ ವಿಚಿತ್ರಾನ್ನವನ್ನು ಭೋಜನ ಮಾಡಿದ ಮತ್ತು ಅವನಿಗೆ ಅತ್ಯಂತ ಪ್ರಿಯವಾದ ರೂಪವು ಹೀಗೆ ಬೃಹತ್ ನಾರದೀಯ ಪುರಾಣೋಕ್ತ ಪ್ರಮಾಣದಿಂದ ಬಳಿತ್ಥಾ ಇತ್ಯಾದಿ ವಾಯುಸೂಕ್ತವು (ವಾದಿರಾಜರಿಗೆ) ಭಾವೀ ವಾಯುವಿನ ಮೂರುರೂಪಗಳಿಗೆ ಸಾಧಕವಾದುದು ಲಾತವ್ಯರ ಅವತಾರವು ಶ್ರುತಿ ಪ್ರಸಿದ್ಧವಾದದ್ದು ಹೀಗೆ ಸ್ಫುಟವಾಗಿ ತಿಳಿಯುತ್ತದೆ.

**ಟಿಪ್ಪಣಿ :–** ೧. **"ಕೃಷ್ಣದತ್ತ ವಿಚಿತ್ರಾನ್ನ ಭೋಕ್ತೃ ತತ್ಪ್ರಿಯಮುತ್ತಮಮ್"** ಇದು ವಾದಿರಾಜ ರೂಪವೆಂದು ತಿಳಿಯಬಹುದು.

೨. ಬಳಿತ್ತಾ ಸೂಕ್ತದಲ್ಲಿ ವಾಯುದೇವರ ಅವತಾರ ತ್ರಯಗಳಲ್ಲಿಯೂ ಇದೇಪ್ರಕಾರ ಮೊದಲಿನರೂಪ ವಿಶ್ವರೂಪ ಶ್ರೀರಾಮನ ಸಂದೇಶವನ್ನು ಸೀತಾದೇವಿಗೆ ಮುಟ್ಟಿಸಿತು. ಎರಡನೇ ಭೀಮರೂಪವು ಕೌರವರ ಸೈನ್ಯವನ್ನೇ ನಾಶಮಾಡಿತು ಮೂರನೆಯ ಮಧ್ವರೂಪ ಶ್ರೀ ಕೃಷ್ಣನಿಗೆ ಅತ್ಯಂತ ಪ್ರಿಯವಾದರೂಪವು ಹೀಗೆವಾಯು ಮತ್ತು ಲಾತವ್ಯರ ಪರವಾಗಿದೆ.

**ಶ್ಲೋಕ:–** ಲಾತವ್ಯಸ್ಯಾವತಾರಶ್ಚ ಶ್ರುತಿಸಿದ್ಧಾ ಇತಿ ಸ್ಫುಟಮ್ ।
ಶ್ರುತೇಃ ತ್ರ್ಯರ್ಥಪರತ್ವಾತ್ತು ಸೂಕ್ತೇ ವರ್ಣ್ಯಾಸ್ತ್ರಯೋಽಪಿ ಹಿ ।
ಹರಿರ್ವಾಯುಶ್ಚ ಲಾತವ್ಯ ಇತಿ ಸ್ಮೃತಿರಿಯಂ ಜಗೌ ॥ ೧೩ ॥

**ಅರ್ಥ :–** ವೇದಗಳಿಗೆ ಮೂರು ಅರ್ಥಗಳಿರುವ ಪ್ರಯುಕ್ತ (ಬಳಿತ್ಥಾ ಇತ್ಯಾದಿ ವಾಯು) ಸೂಕ್ತಗಳಿಗೆ ಹರಿವಾಯು ಲಾತವ್ಯ – ಈ ಮೂರರ ಪರ ವರ್ಣನೆಯೂ ಕೂಡ (ಸಾಧ್ಯವೆಂದು) ಈ ಸ್ಮೃತಿಯು (ಬೃಹತ್ ನಾರದೀಯ) ಪುರಾಣವು ಹೇಳುತ್ತದೆ.

**ಶ್ಲೋಕ:–** "ಋಗಾದ್ಯಾ ಇತಿಹಾಸಾಶ್ಚ ಪುರಾಣಂ ಪಂಚರಾತ್ರಕಮ್ ।
ಪ್ರೋಕ್ತಾಃ ಸಪ್ತಶಿವಾಸ್ತಾಶ್ಚ ಮಾತರಸ್ತತ್ರ ಸಂಸ್ಥಿತಮ್ ।
ತದ್ವಿಚಾರಪರಂ ಪ್ರೋಕ್ತಂ ಜ್ಞಾನದೊಗ್ಧೃ ತೃತೀಯಕಮ್ ।
ಲಾತವ್ಯಸ್ಯ ಋಜೋಸ್ತಸ್ಯ ದಶಪ್ರಮತಿನಾಮಕಮ್ ।
ವಾದಿನಾಂ ಜ್ಞಾನದಾನೈಕಶೀಲಾನಾಂ ರಾಜನಂ ಯತಃ ।
ವೇತಿ ಜ್ಞಾನಂ ಸಮುದ್ದಿಷ್ಟಂ ದೇತಿ ದಾನಮುದಾಹೃತಮ್ ।
ಪ್ರೋಕ್ತಂ ಶೀಲಮಿಕಾರೇಣ ರಾಜನಂ ರಾಜಶಬ್ದಿತಮ್ ।
ವಾದಿರಾಜಾಭಿಧಂ ರೂಪಂ ದಶಪ್ರಮತಿಸಂಜ್ಞಿತಮ್ ।
ಪೂರ್ಣಜ್ಞಾನಂ ವಿನಾ ಪ್ರೋಕ್ತಂ ರಾಜನಂ ತು ಕಥಂ ಭವೇತ್ ।
ದಶೇತಿ ಪೂರ್ಣಮುದ್ದಿಷ್ಟಂ ಜ್ಞಾನಂ ಪ್ರಮತಿಸಂಜ್ಞಿತಮ್ ।
ಯೋಷಣೋಽಜನಯಂತೈತದ್ ವಾದಿರಾಜಾಭಿಧಂ ವಪುಃ ।
ತಸ್ಮಾದೇವ ಜ್ಞಾನರೂಪಾನ್ಮಹಿಷಸ್ಯ ಹರೇರ್ಗುಣಾನ್ ।
ಪಾಲನಾದ್ವರಣೀಯತ್ವಾದ್ವರ್ಪಾ ಇತ್ಯಭಿ ಶಬ್ದಿತಾನ್ ।
ರುದ್ರಾದ್ಯಾಃ ಸೂರಯಶ್ಚಾನ್ಯೇ ಜ್ಞಾನವಂತಃ ಸುಖೇನ ತು ।
ಪ್ರಕೃಷ್ಟಜ್ಞಾನರೂಪೋ ಯೋ ಭಾವಿಮಧ್ವಃ ಪ್ರಕೀರ್ತಿತಃ ।
ಮಧುಶಾಸ್ತ್ರಂ ಮಧ್ವಶಾಸ್ತ್ರಂ ಸಮ್ಯಗ್ ವೇತ್ತಾ ಗುರುಸ್ತದಾ ।
ಪ್ರಮಾಣ ರೂಪವೇದಾದೌ ಗತಿಮಾನ್ ಗೂಹಿತಂ ಹರಿಮ್ ।

ಆಸಮಂತಾತ್ಪತಿತ್ವೇತು ಮಥ್ನಾತ್ಯಾಮ್ನಾಯಶಾಸ್ತ್ರತಃ ।
ರೂಪತ್ರಯಂ ಪ್ರೇರ್ಯತೇ ಯತ್ ಪಿತ್ರಾ ಸ್ವಸ್ಯ ಪರಾತ್ಮನಾ ।
ಪ್ರಶ್ನರೂಪಾಂಸ್ತೃಣಾದೀನ್ ಸ ದಂತೇಷ್ವಾರೋಪ್ಯ ಜಕ್ಷತಿ ।
ಲಾತವ್ಯಾಚಾರ್ಯವರ್ಯಸ್ಯ ಯಸ್ಯರೂಪತ್ರಿಕಂ ಹ್ಯುಭೌ ।
ರಮಾನಾರಾಯಣೌ ಸಾಕ್ಷಾದಿನ್ವತಸ್ತತ್ಕೃಪಾ ಶುಚಿಃ ।
ಅಭ್ಯಾಮೇವಾವರಃ ಪ್ರೋಕ್ತಸ್ತಯೋರಾಜ್ಞಾನುಸಾರತಃ ।
ವಿಶೇಷೇಣಾಭಿವೃದ್ಧೋಽಭೂದೃಗಾದ್ಯಾಸ್ವಾರುಹತ್ಕ್ರಮಾತ್ ।
ಸನಾತನಾಸು ವಾಚಾಸು ನೂತನಾಸ್ವವರಾಸು ಚ ।
ಪಂಚರಾತ್ರಪುರಾಣೇತಿಹಾಸಾಖ್ಯವಿವಿಧಾಸು ಚ ।
ಇತಿ ಸೂಕ್ತಗತಂ ರೂಪತ್ರಯಮೇತನ್ಮಹಾತ್ಮನಃ ।
ಯೋವೇದ ವೇದವಿತ್ಸ್ಯಾತ್ತತ್ತ್ವವಿತ್ತತ್ಪ್ರಸಾದತಃ ।
ಇತಿ ಋಕ್‌ಸಂಹಿತಾವಾಕ್ಯಾದ್ ಬಳಿತ್ಥಾಸೂಕ್ತಮೇವ ತತ್ ।
ಲಾತವ್ಯಸ್ಯಾವತಾರಾಣಾಂ ವರ್ಣಯತ್ಯಂಜಸಾ ತ್ರಯಮ್ ॥ ೧೪ ॥

**ಅರ್ಥ:–** ಋಗಾದಿ (ನಾಲ್ಕು ವೇದಗಳು) (ಮೂಲರಾಮಾಯಣ) ಮಹಾಭಾರತ ವೆಂಬ ಇತಿಹಾಸಗಳು (ಸಾತ್ವಿಕ) ಪುರಾಣಗಳು ಪಂಚರಾತ್ರಗಮ – ಈ ಏಳು ಮಂಗಳಕರವಾದ ಶಾಸ್ತ್ರಗಳು ಇವುಗಳಲ್ಲಿ ಪ್ರಮಾಣಗಳು ಸಂಸ್ಥಿತವಾಗಿವೆ. ಈ ವಿಚಾರಪರವು ಋಜುಗಳಾದ ಲಾತವ್ಯರ ಜ್ಞಾನವನ್ನು ಕರೆಯುವ ದಶಪ್ರಮತಿ ಎಂಬ ಹೆಸರಿನ ಮೂರನೇ ರೂಪದಿಂದ ಹೇಳಲ್ಪಟ್ಟಿದೆ. (ಈ ದಶಪ್ರಮತಿ ಎಂಬ ನಾಮಕನು) ಜ್ಞಾನದಾನವೇ ಮುಖ್ಯ ಶೀಲವಾಗಿಯುಳ್ಳ ವಾದಿಗಳಿಗೆ "ರಾಜನಂ" ಆದ ಕಾರಣ 'ವಾ' ಎಂದರೆ ಜ್ಞಾನವೆಂದೂ 'ದ' ಎಂದರೆ ದಾನವೆಂದೂ 'ಇ' ಎಂದರೆ ಶೀಲ ವೆಂದು ಹೇಳಲ್ಪಟ್ಟಿದೆ. 'ರಾಜ' ಶಬ್ಧದಿಂದ 'ರಾಜನಂ' ಹೇಳಲ್ಪಟ್ಟಿದೆ (ಆದ್ದರಿಂದ) ವಾದಿರಾಜ ಎನ್ನುವ ಹೆಸರು 'ದಶಪ್ರಮತಿ' ಸೂಚಕವಾಗಿದೆ ಪೂರ್ಣಜ್ಞಾನ ವಿಲ್ಲದೆ ಹೇಗೆ 'ರಾಜನಂ' ಎಂದು ಹೇಳಲ್ಪಡುತ್ತದೆ ? ದಶ ಎಂದರೆ 'ಪೂರ್ಣ' ಎಂಬುದಾಗಿಯೂ ಪ್ರಮತಿ ಎನ್ನುವುದು ಜ್ಞಾನವನ್ನೂ ಸೂಚಿಸುತ್ತದೆ. ಈ ವಾದಿರಾಜವೆನ್ನುವ ಹೆಸರಿನ ಶರೀರವನ್ನು (ಜ್ಞಾನ, ದಾನ, ಶೀಲ, ಶರೀರವನ್ನು) (ಜ್ಞಾನ ದೋಹನಕ್ಕಾಗಿ) ಸ್ತ್ರೀಯರು ಹಡೆದರು. (ಗುರುವಿನ ತಾಯಿಯಾದ್ದರಿಂದ ಸ್ತ್ರೀ ಯರೆಂದು ಬಹುವಚನವು ಪ್ರಯೋಗಿಸಲ್ಪಟ್ಟಿದೆ. ಮತ್ತು ಲಕ್ಷ್ಮೀದೇವಿಯ ಶ್ರೀ, ಭೂ, ದುರ್ಗಾರೂಪಗಳ ಸನ್ನಿಧಾನ ವಿಶೇಷದಿಂದಲೇ ಗುರುವಿನ ತಾಯಿ ಹಡೆದಳೆಂದು ತಿಳಿಯಬೇಕು. ರಕ್ಷಿಸುವುದರಿಂದಲೂ, ವರಣೀಯ ವಾದುದರಿಂದಲೂ "ವರ್ಷಾ" ಶಬ್ಧಿತವಾದ ಪರಮ ಪೂಜ್ಯನಾದ ಶ್ರೀ ಹರಿಯ ಜ್ಞಾನರೂಪ ಗುಣಗಳನ್ನು ಅವನಿಂದಲೇ (ಲಾತವ್ಯನಿಂದಲೇ) ರುದ್ರಾದಿ ದೇವತೆಗಳು ಮತ್ತು ಅನ್ಯ ಜ್ಞಾನಿಗಳು ಸುಖವಾಗಿ ತಿಳಿದರು. ಶ್ರೇಷ್ಠವಾದ ಜ್ಞಾನರೂಪವುಳ್ಳ (ಈ ವಾದಿರಾಜನು) ಭಾವೀಮಧ್ವ ನೆಂದು ಸ್ತುತಿಸಲ್ಪಟ್ಟಿದ್ದಾರೆ. ಮಧು ಶಾಸ್ತ್ರವಾದ ಮಧ್ವಶಾಸ್ತ್ರವನ್ನು ಚೆನ್ನಾಗಿ ತಿಳಿದ ಈ ಗುರುಗಳು ಪ್ರಮಾಣರೂಪವಾದ ವೇದಾದಿಗ್ರಂಥಗಳಲ್ಲಿ ಸದ್ಗತಿಯುಳ್ಳವರು. (ಅಸತ್ ಶಾಸ್ತ್ರಗಳಿಂದ) ಗೌಪ್ಯ ಮಾಡಲ್ಪಟ್ಟ ಶ್ರೀಹರಿಯನ್ನು ಸರ್ವೋತ್ತಮವನ್ನಾಗಿ ವೇದಶಾಸ್ತ್ರಗಳಿಂದ ಮಥಿಸಿದರು. ತನ್ನ ತಂದೆಯಾದ ಪರಮಾತ್ಮನಿಂದ ಪ್ರೇರಿತವಾದ ರೂಪತ್ರಯಗಳಿಂದ ಪ್ರಶ್ನರೂಪವಾದ ತೃಣಾದಿಗಳನ್ನೇ ಹಲ್ಲುಗಳಲ್ಲಿ ಅಗಿದು ಪುಡಿಮಾಡಿದರು. ಶ್ರೇಷ್ಠರಾದ ಲಾತವ್ಯಾಚಾರ್ಯ ಮೂರು ರೂಪಗಳನ್ನು ಸಾಕ್ಷಾತ್ ಲಕ್ಷ್ಮೀ ನಾರಾಯಣರಿಬ್ಬರು ಪ್ರೇರಿಸುವರು. ಅವರ ಕೃಪೆಯಿಂದ ಪವಿತ್ರರಾದ ಅವರಿಬ್ಬರಿಗಿಂತ ಅವರರಾದ ಇವರು, ಅದರ ಆಜ್ಞಾನುಸಾರವಾಗಿ (ವ್ಯಾಖ್ಯಾನ ಮಾಡಿದರು ಸನಾತನವಾದ ಋಗಾದಿ ವೇದಗಳಲ್ಲಿರುವ ವಾಕ್ಯಗಳೂ ನೂತನವಾದ ಅವರಗಳಾದ ಪಂಚರಾತ್ರ, ಪುರಾಣ, ಇತಿಹಾಸವೇ ಮೊದಲಾದ ವಿವಿಧ ಶಾಸ್ತ್ರಗಳ ವಾಕ್ಯಗಳೂ (ಇವರ ವ್ಯಾಖ್ಯಾನದಿಂದಾಗಿ) ಆರೋಹಣ ಕ್ರಮದಲ್ಲಿ ವಿಶೇಷವಾಗಿ ಅಭಿವೃದ್ಧಿಯನ್ನು ಹೊಂದಿದವು (ಅಂದರೆ ಅವುಗಳ ಯಥಾರ್ಥವಾದ ಅರ್ಥವು ಎಲ್ಲಾಕಡೆಯಲ್ಲೂ ಪ್ರಚಾರವಾಯಿತೆಂದು ಭಾವ) ಹೀಗೆ ಈ ಮಹಾತ್ಮರ ಬಳಿತ್ಥಾದಿ – ಸೂಕ್ತ ಪ್ರತಿಪಾದಿತ ರೂಪತ್ರಯಗಳನ್ನು ಯಾರು ತಿಳಿಯುತ್ತಾನೋ ಅವನು ಅವರ ಪ್ರಸಾದದಿಂದ ವೇದ ಮತ್ತು ತತ್ವಗಳನ್ನು ತಿಳಿದವನಾಗುತ್ತಾನೆ. ಹೀಗೆ ಋಕ್ ಸಂಹಿತೆಯಲ್ಲಿರುವ ವಾಕ್ಯಗಳಿಂದಲೂ, ಬಳಿತ್ಥಾ ಸೂಕ್ತದಲ್ಲಿ ಹೇಳಲ್ಪಟ್ಟಿದೆ. ಲಾತವ್ಯ ಋಜುಗಳ ಅವತಾರ ತ್ರಯಗಳನ್ನೇ ಚನ್ನಾಗಿ ವರ್ಣಿಸಿರುತ್ತದೆ.

**ಶ್ಲೋಕ:–** ಕೃಶಂ ಕೃತಘ್ನಮಿತ್ಯಾದ್ಯಂ ಶ್ರೀಭಾಗವತನಾಮಕೇ ।
ಬ್ರಹ್ಮಣಾ ವರ್ಣಿತಂ ದೋಷಂ ವಾದಿರಾಟ್ ಸ ಋಜೂತ್ತಮಃ ॥ ೧೫ ॥
ಕೃತೌ ಸರಸಭಾರತ್ಯಾಮೇವಂ ವರ್ಣಿತವಾನ್ ಯಥಾ ।
"ಇತಿ ಸ್ವಪಿತರಿ ಶ್ರೀಶೇ ಭಕ್ತ್ಯಾ ಯಸ್ತು ಪಿತಾಮಹಃ ।
ಅದರ್ಶಯಸ್ತ್ವ ದೋಷಾನ್ನಃ ಕುಲವೃದ್ಧೋ ಗುರುರ್ಮಮ ।"
ಇತಿ ಬ್ರಹ್ಮಾಣಮಾತ್ಮೀಯಕುಲವೃದ್ದಂ ಪ್ರಕೀರ್ತಯನ್ ॥ ೧೬ ॥

**ಅರ್ಥ:–** 'ಕೃಶಂ, ಕೃತಘ್ನಂ' ಇತ್ಯಾದಿಯಾಗಿ ಬ್ರಹ್ಮದೇವರು ಭಾಗವತ ಪುರಾಣದಲ್ಲಿ ದೋಷಗಳನ್ನು ವರ್ಣಿಸಿದ್ದಾರೆ. ಋಜೋತ್ತಮರಾದ ವಾದಿರಾಜರು ತಾವುರಚಿಸಿರುವ ಸರಸಭಾರತೀ ವಿಲಾಸ ಗ್ರಂಥದಲ್ಲಿ ಅದನ್ನು ಈ ರೀತಿಯಾಗಿ ವರ್ಣಿಸಿದ್ದಾರೆ. "ಹೀಗೆ ತನ್ನ ಪಿತನಾದ ಶ್ರೀಶನಲ್ಲಿ ಭಕ್ತಿಯಿಂದ ಪಿತಾಮಹನಾದ, ನಮ್ಮ ಕುಲದಲ್ಲಿ ವೃದ್ಧರಾದ ನನ್ನ ಗುರುಗಳಾದ ಬ್ರಹ್ಮದೇವರು ತಮ್ಮ ದೋಷಗಳನ್ನು ತೋರಿಸಿದ್ದಾರೆ." ಈ ರೀತಿ ಬ್ರಹ್ಮದೇವರನ್ನು ತಮ್ಮ (ಋಜುಗಳ) ಕುಲವೃದ್ಧರೆಂದು ಸ್ತುತಿಸಿದ್ದಾರೆ.

**ಶ್ಲೋಕ:– ಆತ್ಮಾನಮೃಜುವಂಶಸ್ಥಂ ಪ್ರಾಬ್ರವೀತ್ ಕರುಣಾನಿಧಿಃ ।**
**ಮೂಕಾಂಬಿಕಾಂ ತಥಾ ದೇವಿಮೇಕಾಂತಿಕಜನಪ್ರಿಯಾಮ್ ॥ ೧೭ ॥**
**ತೀರ್ಥಪ್ರಬಂಧೇ ಪ್ರಾವೋಚಸ್ಸ್ವಯಮೇಕಾಂತಿಕಂ ತ್ವಿತಿ ।**

**ಅರ್ಥ:–** ತಮ್ಮನ್ನು ಋಜುವಂಶದಲ್ಲಿರುವವರೆಂದು ಕರುಣಾನಿಧಿಗಳಾದ ವಾದಿರಾಜರು ಹೇಳಿದ್ದಾರೆ.

(ತಮ್ಮಿಂದ ರಚಿತವಾದ) ತೀರ್ಥ ಪ್ರಬಂಧ ಗ್ರಂಥದಲ್ಲಿ "ಮೂಕಾಂಬಿಕಾ ದೇವಿಯು ಏಕಾಂತ ಭಕ್ತ ಜನ ಪ್ರಿಯಳು" (ಎಂದು ಹೇಳಿರುವಲ್ಲಿ) ತಮ್ಮನ್ನು ಏಕಾಂತಭಕ್ತರೆಂದು ಹೇಳಿರುವರು. ಋಜುಗಳು ಏಕಾಂತ ಭಕ್ತರು.

**ಶ್ಲೋಕ:– ಕಶ್ಚಿದ್ವಿಜವರಶ್ರೇಷ್ಠ ಇತಿ ಭಾಗವತೋಕ್ತಿತಃ ॥ ೧೮ ॥**
**ರುಕ್ಮಿಣೀಪತ್ರನೇತಾರಂ ಕಿಮಾ ಬ್ರಹ್ಮೇತಿ ಸಂಜಗೌ ।**
**ಕಶಬ್ದೋ ಬ್ರಹ್ಮವಾಚೀತಿ ಭಾವಿಬ್ರಹ್ಮಾsತ್ರ ಕೀರ್ತಿತಃ ॥ ೧೯ ॥**

**ಅರ್ಥ :–** "ಕಶ್ಚಿದ್ವಿಜವರಶ್ರೇಷ್ಠ" ನೆಂಬ ಭಾಗವತದ ವಾಕ್ಯದಿಂದ, ರುಕ್ಮಿಣೀ ಪತ್ರವನ್ನು (ಶ್ರೀ ಕೃಷ್ಣನ ಬಳಿ) ತೆಗೆದುಕೊಂಡ ಹೋದ ದ್ವಿಜ ಶ್ರೇಷ್ಠನು ಬ್ರಹ್ಮನೆಂದು ಹೇಳಿದೆ. (ಕಶ್ಚಿನ ಪದದಲ್ಲಿರುವ) 'ಕ' ಪದವು ಬ್ರಹ್ಮನನ್ನು ಹೇಳುತ್ತದೆ. ಇಲ್ಲಿ ಭಾವಿ ಬ್ರಹ್ಮನು ಹೇಳಲ್ಪಟ್ಟಿದ್ದಾನೆ.

**ಟಿಪ್ಪಣಿ :–** ರುಕ್ಮಿಣಿಯಿಂದ ಶ್ರೀಕೃಷ್ಣನಿಗೆ ಪತ್ರವನ್ನು ತೆಗೆದುಕೊಂಡು ಹೋದ ಬ್ರಾಹ್ಮಣನಿಗೆ 'ದ್ವಿಜವರ ದ್ವಿಜಶ್ರೇಷ್ಠ' ಎಂಬ ಶಬ್ದವನ್ನು ಭಾಗವತದಲ್ಲಿ ಬಳಸಲಾಗಿದೆ. ರುಕ್ಮಿಣೀಶವಿಜಯದಲ್ಲಿ ವಾದಿರಾಜರು " ಅಜಯಾಪ್ರೇಷಿತಂ ಪತ್ರಂ ದ್ವಿಜಃ ಕಶ್ಚಿದುಪಾಹರತ" ಎಂದು ಹೇಳಿದ್ದಾರೆ. ಇವುಗಳಲ್ಲಿ ದ್ವಿಜ :– ಗರುಡನಿಂದ ಅಥವಾಶ್ರೇಷ್ಠ, ಎಂದರೆ ಋಜುಗಳೇ ಇದನ್ನು ಕಶ್ಚಿತ್ ಪದದಲ್ಲಿ ಕ :– ಬ್ರಹ್ಮಪದ ಯೋಗ್ಯನು ಚಿತ್ :– ಜ್ಞಾನಿ ಎನ್ನುವ ಅರ್ಥವನ್ನು ಸೂಚಿಸುತ್ತದೆ. ಹೀಗೆ ಗ್ರಂಥಗಳ ಶಬ್ದಗಳಿಗೆ ಐಕ್ಯಾರ್ಥ ಬಂದದ್ದಕ್ಕೆ ಶ್ರೀವಾದಿರಾಜರೇ ಪತ್ರವನ್ನು ಒಯ್ಯುವರೆಂದು ಪ್ರಾಜ್ಞ ಪರಂಪರಾ ಪ್ರಸಿದ್ಧಿಯಿದೆ. ಇವರೇ ಒಯ್ದರೆನ್ನುವದು ಸ್ವಾಪ್ನವೃಂದಾವನಾಖ್ಯಾನದಲ್ಲಿ "ವೈದ್ಯೋಧನ್ವಂತರಿ" "ಕೃಷ್ಣ ಶಾಪಾಖ್ಯ ರೋಗಹಾ" ಎಂದು ಹೇಳಿದ ವಿಷಯದಿಂದಲೂ ಸ್ಪಷ್ಟವಾಗುತ್ತದೆ.

**ಶ್ಲೋಕ:– "ರುದ್ರೇಂದ್ರವರುಣಾದ್ಯಾಸ್ತು ದೇವಾಃ ಸರ್ವೇ ಹ್ಯುಪಾಸತೇ ।**
**ಪಂಚವೃಂದಾವನೇsಶ್ವಾಸ್ಯ" ಮಿತಿ ಸ್ವವಚನಾದ್ಗುರುಃ ॥ ೨೦ ॥**

**ಅರ್ಥ:–** "ರುದ್ರ, ಇಂದ್ರ, ವರುಣರೇ ಮೊದಲಾದ ಎಲ್ಲಾ ದೇವತೆಗಳು ಪಂಚವೃಂದಾವನ ದಲ್ಲಿ ಹಯವದನನ್ನು ಉಪಾಸಿಸುತ್ತಾರೆ." ಎನ್ನುವ ತಮ್ಮ ವಚನದಿಂದಲೇ ಗುರುಗಳು

**ಶ್ಲೋಕ:– ಅಶ್ವಾಸ್ಯಪ್ರತಿಮಾಭೂತಮಾತ್ಮಾನಂ ಸುರಪೂಜಿತಮ್ ।**
**ಪಂಚವೃಂದಾವನಾಖ್ಯಾನೇ ಸ್ವಯಮೂಚೇ ದ್ವಿಜಾಸ್ಯತಃ ॥ ೨೧ ॥**

**ಅರ್ಥ :–** "ಹಯವದನನಿಗೆ ಪ್ರತಿಮಾಭೂತನಾದ ತಾನು ಆ ದೇವತೆಗಳಿಂದ ಪೂಜಿತನಾದೆನು" ಎಂದು ವಿಪ್ರನ ಮುಖದ್ವಾರ ಪಂಚವೃಂದಾವನಾಖ್ಯಾನದಲ್ಲಿ ಸ್ವಯಂಹೇಳಿದ್ದಾರೆ.

**ಶ್ಲೋಕ:– "ಯೋಮಾಮೇವಂ ವಿಜಾನಾತಿ ಋಜುಸ್ಥಂ ಪುಣ್ಯಕೃನ್ನರಃ ।**
**ಸ ಯಾತಿ ಚಾಲಯಂ (ನಿಲಯಂ) ಪುಣ್ಯಂ ಯುದ್ಗತ್ವಾ ನ ನಿವರ್ತತೇ ।**
**"ಬ್ರಹ್ಮಣೋದಕ್ಷಿಣೇಕರ್ಣೇ ವಾಯೋಃ ಕರ್ಣೇ ತು ವಾಮಕೇ**
**ಸವಿಂದಂ ತು ಕರೋಮ್ಯದ್ಯ ವಿಷ್ಣೋಸ್ತತ್ವಸ್ಯ ನಿರ್ಣಯೇ ।"**
**"ತವ ಶ್ವಾಸಪ್ರಣೇತಾಹಂ ಭವಿಷ್ಯಾಮಿ ನ ಸಂಶಯಃ ।**
**ಮಮಾಪಿ ಜೀವೋತ್ತಮತ್ವಂ ಶ್ರುತ್ವಾಸರ್ವೇ ಮಮಪ್ರಿಯಾಃ ।"**
**"ಗರ್ವಂ ಹಿತ್ವಾ ಪ್ರದಾಸ್ಯಂತು ಗುರ್ವಂತರ್ಯಾಮಿಣಃ ಕರಮ್ ।**
**ಹಯಗ್ರೀವಾಜ್ಞಯಾ ವಾತವಿರಂಚೌ ಸ್ವಂ ಚ ವೈಭವಮ್ ।"**
**ವಿನಾ ವಾಣೀಪತಿತ್ವಂ ಮೇ ದತ್ತವಂತೌ ಚ ಕಿಂ ವದ ।**

**ಅಹಮೇಕೇನ ರೂಪೇಣ ಶೋಕಂ ಪರಿಹರನ್ ಸದಾ ।**
**ಶ್ಲೋಕಾನ್ ವಕ್ತುಂ ಪ್ರವಿಷ್ಟೋಽಹಂ ಕಾಕಬುದ್ಧೌ ದ್ವಿಜೋತ್ತಮೇ ।**
**ತಥೈಕೇನೈವ ರೂಪೇಣ ಮತ್ತೋಕೇ ಚ ಪ್ರವಿಶ್ಯತು ।**
**ಲೋಕಸ್ಯ ದರ್ಶನಾತ್ಸದ್ಯಃ ಶೋಕಂ ಪರಿಹಾರಾಮ್ಯಹಮ್ ।**
**ದೇವವೃಂದ ಸಮಾಯುಕ್ತೋ ಮದ್ವೃಂದಾವನಸಂಸ್ಥಿತಃ ।**
**ಸದ್ವೃಂದಾನಾಂ ಪ್ರಯಚ್ಛಾಮಿ ಚೇಷ್ಟವೃಂದಾನಿ ಸರ್ವದಾ" ।**
**ಇತ್ಯಾದ್ಯಾಖ್ಯಾನವಾಕ್ಯಾನಿ ವಾದಿರಾಜೇ ಗುರೂತ್ತಮೇ ।**
**ಋಜೂತ್ತಮತ್ವಂ ದೇವೈಶ್ಚ ಪೂಜ್ಯತ್ವಂ ಸಾಧಯಂತಿ ಹಿ ॥ ೨೨ ॥**

ಅರ್ಥ:– ೧) ಪುಣ್ಯವನ್ನು ಮಾಡಿದ ಯಾವ ಮನುಷ್ಯನು ನನ್ನನ್ನು ಋಜುದೇವತೆಯನ್ನಾಗಿ ತಿಳಿಯುತ್ತಾನೆಯೋ, ಅವನು ಯಾವ ಪುಣ್ಯನಿಲಯಗಳಿಗೆ ಹೋದರೆ ಪುನಃ ಹಿಂತಿರುಗುವುದಿಲ್ಲವೋ, ಅಂತಹ (ವೈಕುಂಠಾದಿ) ಪುಣ್ಯ ನಿಲಯಗಳಿಗೆ ಹೋಗುತ್ತಾನೆ.

೨) ಬ್ರಹ್ಮದೇವರ ಬಲಗಿವಿಯಲ್ಲಿಯೂ, ವಾಯುದೇವರ ಎಡಗಿವಿಯಲ್ಲಿಯೂ ವಿಷ್ಣು ತತ್ವವಿಚಾರ ವಿನಿಮಯವನ್ನು ಮಾಡುವೆನು.

೩) (ನನ್ನ ವಾಯುತ್ವದೆಶೆಯಲ್ಲಿ) ನಿಸ್ಸಂಶಯವಾಗಿಯೂ ನಿನ್ನ ಶ್ವಾಸ ನಿಯಾಮಕನಾಗುವೆನು.

೪) ನನ್ನ ಜೀವೋತ್ತಮತ್ವವನ್ನು ನನ್ನಿಂದ ಹೇಳಲ್ಪಟ್ಟ ಆಖ್ಯಾನದಿಂದ ಕೇಳಿ, ನನಗೆ ಪ್ರಿಯರಾದವರೆಲ್ಲರೂ ಗರ್ವವನ್ನು ತ್ಯಜಿಸಿ, ನನ್ನ ಅಂತರ್ಯಾಮಿ ಹರಿಗೆ ಕರವನ್ನು ಕೊಡಲಿ

೫) ಹಯಗ್ರೀವದೇವರ ಆಜ್ಞೆಯಂತೆ ವಾಯು ಮತ್ತು ಬ್ರಹ್ಮರು, ವಾಣಿ ಪತಿತ್ವವನ್ನು ಬಿಟ್ಟು ತಮ್ಮ ವೈಭವಗಳನ್ನೆಲ್ಲಾ ನನಗೆ ಕೊಟ್ಟಿದ್ದಾರೆ. (ನನ್ನ ಮಹಾತ್ಮೆಯನ್ನು) ಏನು ಹೇಳುವುದು?

೬) (ಜನರ) ಶೋಕ ಪರಿಹಾರಕವಾದ ಆಖ್ಯಾನವನ್ನು ಹೇಳಲು. ಕಾಗೆಯಂತೆ ಪರೋಪಕಾರ ಬುದ್ಧಿಯುಳ್ಳ ದ್ವಿಜೋತ್ತಮನಾದ ವಿಪ್ರನಲ್ಲಿ, ನಾನು ಒಂದು ರೂಪದಿಂದ ಪ್ರವಿಷ್ಟನಾಗಿರುತ್ತೇನೆ. ಹಾಗೆಯೇ ರೂಪಾಂತರದಿಂದ ನನ್ನ ಪುತ್ರನಾದ ವೇದನಿಧಿಯಲ್ಲಿ ಪ್ರವಿಶ್ಯನಾಗಿ ಅವರ ದರ್ಶನ ಮಾಡುವ ಜನರ ಶೋಕವನ್ನು ಪರಿಹರಿಸುತ್ತೇನೆ.

೭) ಭಗವದ್ರೂಪಗಳ ಸಮುದಾಯದಿಂದಲೂ, ಬ್ರಹ್ಮ, ವಾಯು, ರುದ್ರಾದಿದೇವತೆಗಳ ಸಮೂಹದಿಂದಲೂ ಸಹಿತನಾಗಿ ನಾನು ನನ್ನ ವೃಂದಾವನದಲ್ಲಿ ಪ್ರಧಾನರೂಪದಿಂದ ಸ್ಥಿತನಾಗಿದ್ದೇನೆ. ಸರ್ವದಾ ಮುಕ್ತಿಯೋಗ್ಯ ಸೇವಾಕರ್ತೃಗಳ ಸಮೂಹಗಳಿಗೆ ಅಭೀಷ್ಟವನ್ನು ಕೊಡುತ್ತೇನೆ.

ಇವೇ ಮೊದಲಾದ ವೃಂದಾವನಾಖ್ಯಾನದ ವಾಕ್ಯಗಳು ಉತ್ತಮ ಗುರುಗಳಾದ ವಾದಿರಾಜರ ಋಜುತ್ವ ವಿಷಯವನ್ನು ದೇವತೆಗಳಿಂದ ಪೂಜ್ಯತ್ವ ವಿಷಯವನ್ನು ಸಾಧಿಸುತ್ತದೆ.

**ಶ್ಲೋಕ:–** ಬ್ರಹ್ಮವಾಯೂ ಇವಾಹಂ ಚ ಹರ್ಯನುಗ್ರಹಭಾಜನಮ್ ।
**ಇತಿ ಪ್ರಮೇಯಂ ಗುರುಣಾ ಹ್ಯಾಖ್ಯಾನೇ ಸೂಚಿತಂ ಸ್ವಯಮ್ ॥ ೨೩ ॥**

**ಅರ್ಥ:–** ಬ್ರಹ್ಮ ವಾಯುಗಳಂತೆ ತಾವೂಸಹ ಹರಿಯ ಅನುಗ್ರಹಕ್ಕೆ ಪಾತ್ರರು ಎಂಬ ಪ್ರಮೇಯವನ್ನು ಗುರುಗಳು ಸ್ವಾಪ್ನವೃಂದಾವನಾಖ್ಯಾನದಲ್ಲಿ ತಾವೇ ಸ್ವತಃ ಸೂಚಿಸಿದ್ದಾರೆ.

**ಶ್ಲೋಕ:– ಅತೋ ಮಧ್ವಾರ್ಯಗುರುಣಾ ಯಥಾನುಷ್ಠಿತಮಂಜಸಾ ।**
**ಹಂಸಾನಾಂ ಸಾರ್ವಭೌಮೇನ ಜ್ಞಾನಸಾಮ್ರಾಜ್ಯಪಾಲನೇ ॥ ೨೪ ॥**
**ತಥೈವ ವಾದಿರಾಜೇನ ಯುವರಾಜಾಯಿತೇನ ತತ್ ।**
**ಸಜ್ಜನೋದ್ಧಾರಕಂ ಕರ್ಮ ಕೃತಮಚ್ಯುತ ತುಷ್ಟಯೇ ॥ ೨೫ ॥**

**ಅರ್ಥ:–** ಪರಮ ಹಂಸರುಗಳಿಗೆ ಸಾರ್ವಭೌಮರಾದ, ಗುರುಗಳಾದ ಮಧ್ವಾಚಾರ್ಯರು ವೇದಾಂತ ವಿದ್ಯಾ ಸಾಮ್ರಾಜ್ಯ ಪರಿಪಾಲನೆಯನ್ನು ಎಷ್ಟು ಚೆನ್ನಾಗಿ ನೆರವೇರಿಸಿದರೋ ಹಾಗೆಯೇ ಯುವರಾಜರಂತಿದ್ದ ವಾದಿರಾಜರಿಂದ ಆ ಸಜ್ಜನೋದ್ಧಾರ ಕಾರ್ಯವು ಶ್ರೀ ಹರಿಯ ಪ್ರೀತಿಗಾಗಿ ಮಾಡಲ್ಪಟ್ಟಿತು.

**ಶ್ಲೋಕ:– ಅವತಾರೇ ಭೂತಲೇಽಸ್ಮಿನ್ನತಿಮಾನುಷ ಕರ್ಮಭಿಃ ।**
**ವಾದಿರಾಜಾರ್ಯವರ್ಯೇಣ ಕೃತಂ ಲೋಕಹಿತಂ ಯಥಾ ॥ ೨೬ ॥**

**ತತೋಽಪ್ಯಾಧಿಕೃತಃ ಪಂಚವೃಂದಾವನಗತೇನ ಹಿ ।**
**ತಥೈವೇಷ್ಟಾಪ್ತಯೇ ನೄಣಾಂ ಮಹಿಮಾಽತ್ರ ಪ್ರದರ್ಶತೇ ॥ ೨೭ ॥**

**ಅರ್ಥ:–** ಈ ಭೂಮಿಯಲ್ಲಿ ತಮ್ಮ ಅವತಾರಕಾಲದಲ್ಲಿ ಶ್ರೇಷ್ಠರಾದ ವಾದಿರಾಜರಿಂದ ಲೋಕಹಿತ ಕಾರ್ಯಗಳು, ಅಮಾನುಷ ಕಾರ್ಯಗಳಿಂದ ಹೇಗೆ ಮಾಡಲ್ಪಟ್ಟಿತೋ ಅದಕ್ಕಿಂತಲೂ ಅಧಿಕವಾಗಿ ಪಂಚವೃಂದಾವನ ಪ್ರವೇಶಾನಂತರ, ಅದರಂತೆಯೇ ಮನುಷ್ಯರ ಅಭಿಷ್ಟ ಪ್ರಾಪ್ತಿಗಾಗಿ ವೃಂದಾವನದಲ್ಲಿ ಮಹಿಮೆಯನ್ನು ತೋರಿಸುತ್ತಾರೆ.

**ಶ್ಲೋಕ:–** **ಸೇವ್ಯಮಾನೋ ವಾದಿರಾಜ ಋಜುರಾಜಃ ಪ್ರಸನ್ನಧೀಃ ।**
**ವೃಂದಾವನೇ ಸನ್ನಿಹಿತೋ ಭಕ್ತಾನುಗ್ರಹತತ್ಪರಃ ॥ ೨೮ ॥**

**ಅರ್ಥ:–** ಋಜುಗಳರಾಜರಾದ, ಸಂತೋಷ ಚಿತ್ತರಾದ ವಾದಿರಾಜರು ವೃಂದಾವನದಲ್ಲಿ ಸನ್ನಿಹಿತರಾಗಿದ್ದು ಸೇವಿಸುವ ಭಕ್ತರಿಗೆ ಅನುಗ್ರಹಿಸುತ್ತಿರುವರು.

**ಶ್ಲೋಕ:–** **ಸೋಽಯಂ ಚಿಂತಾಮಣಿರ್ವಾಥ ಕಾಮಧೇನುಃ ಸುರದ್ರುಮಃ ।**
**ಚಕಾಸ್ತೀತ್ಯತ್ರ ಭಕ್ತಾನಾಂ ವೃಂದಂ ಸಾಕ್ಷ್ಯಂ ವದತ್ಯಲಮ್ ॥ ೨೯ ॥**

**ಅರ್ಥ:–** ಈ ವಾದಿರಾಜರು (ಸೇವಿಸುವ ಭಕ್ತರಿಗೆ) ಚಿಂತಾಮಣಿ ಅಥವಾ ಕಾಮಧೇನು ಅಥವಾ ಕಲ್ಪವೃಕ್ಷದಂತಿದ್ದು (ವೃಂದಾವನದಲ್ಲಿ) ಪ್ರಕಾಶಿಸುತ್ತಿರುವರು. ಭಕ್ತರ ಸಮೂಹವೇ ಸಾಕ್ಷಿಯಾಗಿ ಹೀಗೆ ಹೇಳುತ್ತದೆ.

**ಶ್ಲೋಕ:–** **ಅತೋ ಭಕ್ತೈ ರೇಕದಾಪಿ ಶಾಲ್ಮಲೀ ಮಜ್ಜನಂ ತಥಾ ।**
**ತಪೋವನಾಭಿಗಮನಂ ಪಂಚವೃಂದಾವನಸ್ಯ ಹಿ ॥ ೩೦ ॥**
**ತ್ರಿವಿಕ್ರಮಸ್ಯ ವ್ಯಾಸಸ್ಯ ವೇಣುಕೃಷ್ಣಸ್ಯ ಮಾರುತೇಃ ।**
**ಶ್ರೀ ಮದ್ಧವಲಗಂಗಾದೇಃ ಸೇವನಂ ಸರ್ವಕಾಮದಮ್ ॥ ೩೧ ॥**

**ಅರ್ಥ :–** ಆದ್ದರಿಂದ ಭಕ್ತರು ಒಮ್ಮೆಯಾದರೂ ತಪೋವನಕ್ಕೆ ಹೋಗುವದು. ಶಾಲ್ಮಲೀ ನದಿಯಲ್ಲಿ ಸ್ನಾನ ಮಾಡುವುದು ಹಾಗೆಯೇ ತ್ರಿವಿಕ್ರಮದೇವರ ವೇದವ್ಯಾಸರ ವೇಣುಗೋಪಾಲಕೃಷ್ಣನ, ಮುಖ್ಯಪ್ರಾಣನ ವಾದಿರಾಜರ ಪಂಚವೃಂದಾವನದ ಧವಳಗಂಗಾದಿಗಳ ಸೇವನೆ ಮಾಡುವುದು ಸರ್ವಕಾಮಪ್ರದವು (ಅಂದರೆ) ಇವುಗಳನ್ನು ಆಚರಿಸಿದವನು ಸರ್ವಾಭೀಷ್ಟಗಳನ್ನು ಪಡೆಯುವನು.

**ಶ್ಲೋಕ:–** **ಸ್ವಾಪ್ನವೃಂದಾವನಾಖ್ಯಾನಪಠನಂ ಮಧ್ವಸದ್ಗುರೋಃ ।**
**ಭಾಷ್ಯಾದಿ ಸರ್ವಮೂಲಾನಾಂ ಕೃತೀನಾಂ ಪಠನಂ ತಥಾ ॥ ೩೨ ॥**
**ರಘುನಾಥಾರ್ಯಭಕ್ತಾಗ್ರ್ಯ ರಚಿತಸ್ಯ ಶುಭಾಪ್ತಯೇ ।**
**ವಾದಿರಾಡ್ ವೃತ್ತರತ್ನಾನಾಂ ಸಂಗ್ರಹಸ್ಯ ಚ ಕೀರ್ತನಮ್ ॥ ೩೩ ॥**
**ಧರ್ಮಾರ್ಥಕಾಮಮೋಕ್ಷಾಖ್ಯಪುರುಷಾರ್ಥೈಕಸಾಧನಮ್ ।**
**ಇತ್ಯಾದಿನಿಯಮೋಪೇತಾಃ ಭಕ್ತಾಃ ಪ್ರಾಪ್ಸ್ಯಂತ್ಯಭೀಪ್ಸಿತಮ್ ॥ ೩೪ ॥**

**ಅರ್ಥ :–** ಸ್ವಾಪ್ನವೃಂದಾವನಾಖ್ಯಾನವನ್ನು ಪಠಿಸುವದು, ಸದ್ಗುರುಗಳಾದ ಮಧ್ವಾಚಾರ್ಯರ ಭಾಷ್ಯಾದಿ ಸರ್ವಮೂಲಗ್ರಂಥಗಳನ್ನು ಪಠಿಸುವುದು, ಹಾಗೂ ಶುಭ ಪ್ರಾಪ್ತಿಗೆ ವಾದಿರಾಜರ ಶ್ರೇಷ್ಠಭಕ್ತರಾದ ರಘುನಾಥಾಚಾರ್ಯರಿಂದ ರಚಿತವಾದ "ವೃತ್ತ ರತ್ನ ಸಂಗ್ರಹ" ಕೃತಿಯನ್ನು ಕೀರ್ತನ ಮಾಡುವುದು, ಧರ್ಮ ಅರ್ಥ ಕಾಮ ಮೊಕ್ಷಗಳೆಂಬ ಪುರುಷಾರ್ಥಕ್ಕೆ ಸಾಧನ ಮಾಡುವುದು ಇವೇ ಮೊದಲಾದ ನಿಯಮದಿಂದ ಕೂಡಿದ ಭಕ್ತರು ತಮ್ಮ ಅಭಿಷ್ಟಗಳನ್ನು ಹೊಂದುವರು.

**ಶ್ಲೋಕ:–** **ಋಜುಗಣವರತಾ ಶ್ರೀ ವಾದಿರಾಜಸ್ಯಮೋದಾತ್ ।**
**ಶ್ರುತಿಮುಖವಚನೌಘೈಃ ಸಾಧೀತಾಽಸ್ಮದ್ಗುರೂಕ್ತ್ಯಾ ॥ ೩೫ ॥**
**ಋಜುವರಪದಭಕ್ತೈಃ ಸ್ಮರ್ಯತಾಂ ಸರ್ವದೇಯಂ ।**
**ಹರಿಗುರುಕರುಣಾಯಾಃ ಪಾತ್ರಾತಾಂ ನೀಯತಾಂ ಸ್ವಮ್ ॥ ೩೬ ॥**

**ಅರ್ಥ :–** ನನ್ನ ಗುರುಗಳು ಹೇಳಿದ ಶ್ರುತಿ ಮೊದಲಾದ ವಾಕ್ಯಗಳ ಸಮೂಹದಿಂದ ಶ್ರೀ ವಾದಿರಾಜರು ಋಜುಗಣಶ್ರೇಷ್ಠರೆನ್ನುವುದು ಸುಖವಾಗಿಯೇ ಸಾಧಿಸಲ್ಪಟ್ಟಿತು. ಋಜು ಶ್ರೇಷ್ಠರ ಪಾದ ಭಕ್ತರುಗಳಿಂದ ಇದು ಸರ್ವದಾ ಸ್ಮರಿಸಲ್ಪಡಬೇಕು ತಮ್ಮನ್ನು ಹರಿಗುರುಗಳ ಕರುಣೆಗೆ ಪಾತ್ರರನ್ನಾಗಿ ಮಾಡುತ್ತದೆ.

**ಶ್ಲೋಕ:–** **ಇತಿ ಶ್ರೀ ವೇದನಿಧಿತೀರ್ಥಾಂತೇವಾಸಿ ಶ್ರೀರಾಮಚಂದ್ರಚಾರ್ಯವಿರಚಿತೇ**
**ಶ್ರೀ ವಾದಿರಾಜಗುರುವರ ಚರಿತಾಮೃತೇ ಅಷ್ಟಮಬಿಂದುಃ ಸಮಾಪ್ತ ಃ ।**

ಇಲ್ಲಿಗೆ ಶ್ರೀ ವೇದನಿಧಿತೀರ್ಥರ ವಿದ್ಯಾಶಿಷ್ಯರಾದ ರಾಮಚಂದ್ರಾಚಾರ್ಯರಿಂದ ವಿರಚಿತವಾದ ಶ್ರೀ ವಾದಿರಾಜಗುರುವರ ಚರಿತಾಮೃತದಲ್ಲಿ ಎಂಟನೆಯ ಬಿಂದುವು ಮುಗಿಯಿತು.

## ॥ ನವಮ ಬಿಂದುಃ ॥

**ಶ್ಲೋಕ:–** **ದೇವಕ್ಯಾ ಬಾಲಲೀಲಾಯಾಃ ಸಂದರ್ಶನಸಮುತ್ಕಯಾ ।**
**ಪ್ರಾರ್ಥಿತೋ ಬಾಲರೂಪಸ್ಸನ್ ಮಂಥಾನಂ ಮಾತೃಹಸ್ತಗಮ್ ॥ ೧ ॥**
**ಹರನ್ ರಹಸಿ ಭೈಷ್ಮ್ಯಾ ಪ್ರಾಗ್ದೃಷ್ಟಸ್ತುಷ್ಟ ಹೃದಾ ತದಾ ।**
**ಸಂಪ್ರಾರ್ಥಿತೋ ದೇವಶಿಲ್ಪಿಕರಾತ್ಸ್ವಪ್ರತಿಮಾಂ ಶುಭಾಮ್ ॥ ೨ ॥**
**ಸೂತ್ರಮಂಥಾನಹಸ್ತಾಂ ಶ್ರೀದಿವ್ಯಗೋಪಾರ್ಭಕಾಕೃತಿಮ್ ।**
**ಪ್ರಿಯಾಯೈ ಕಾರಯಿತ್ವಾ ಯಾಂ ದದೌ ಸಾ ಪೂಜಿತಾ ತಯಾ ॥ ೩ ॥**

**ಅರ್ಥ:–** (ಶ್ರೀ ಕೃಷ್ಣನು ಗೋಕುಲದಲ್ಲಿ ಬೆಳೆದವನಾದ್ದರಿಂದ, ಅವನ ತಾಯಿ ದೇವಕಿಯು ಶ್ರೀಕೃಷ್ಣನು ಬಾಲ ಲೀಲೆಗಳನ್ನು ನೋಡಿರಲಿಲ್ಲ)

ಬಾಲಲೀಲೆಗಳನ್ನು ನೋಡಬೇಕೆಂಬ ಉತ್ಸಾಹದಿಂದ ದೇವಕಿಯು ಶ್ರೀ ಕೃಷ್ಣನನ್ನು ಪ್ರಾರ್ಥಿಸಲು ತಾಯಿಯ ಕೈಯ ಲ್ಲಿದ್ದ ಕಡಗೋಲನ್ನು ಅಪಹರಿಸಿ ಬಾಲ ರೂಪನಾಗಲು ರಹಸ್ಯದಲ್ಲಿ ರುಕ್ಮಿಣಿಯು ಹಿಂದೆ ಆ ರೂಪವನ್ನು ನೋಡಿದ್ದಳು. ಸಂತುಷ್ಟಳಾದ ಅವಳ ಆಗ ಆರೂಪದ ಪ್ರತಿಮೆ ಬೇಕೆಂದು ಪ್ರಾರ್ಥಿಸಲು (ಶ್ರೀ ಕೃಷ್ಣನು) ದೇವ ಶಿಲ್ಪಿಯಾದ ವಿಶ್ವಕರ್ಮನಿಗೆ ಹೇಳಿ ಕಡಗೋಲು ಮತ್ತು ಹಗ್ಗವನ್ನು ಕೈಯಲ್ಲಿ ಧರಿಸಿದ ದಿವ್ಯ ಬಾಲಗೋಪಾಲ ರೂಪದ ಶ್ರೇಷ್ಠವಾದ ಪ್ರತಿಮೆಯನ್ನು ತನ್ನ ಪ್ರಿಯೆಗಾಗಿ ಮಾಡಿಸಿ ಅವಳಿಗೆ ಕೊಟ್ಟನು. ಆ ಪ್ರತಿಮೆಯು ಅವಳಿಂದ ಪೂಜಿಸಲ್ಪಟ್ಟಿತು.

**ಶ್ಲೋಕ:–** **ನೌಕಾದ್ವಾರಾ ಸಮಾಯಾತಾ ಶ್ರೀ ಮದ್ವಮುನಿನಾ ತತಃ ।**
**ರೂಪ್ಯಪೀಠನಗರ್ಯಾಂ ಹಿ ಸ್ಥಾಪಿತಾ ಪೂಜಿತಾ ಯಥಾ ॥ ೪ ॥**

**ಅರ್ಥ:–** (ಸಾವಿರಾರುವರ್ಷಗಳ) ಬಳಿಕ ನೌಕೆಯಲ್ಲಿ ಬಂದಂತಹ ಆಕೃಷ್ಣ ಪ್ರತಿಮೆಯನ್ನು ಶ್ರೀ ಮದ್ವ ಮುನಿಗಳು ರೂಪ್ಯಪೀಠನಗರದಲ್ಲಿ (ಇಂದಿನ ಉಡುಪಿಕ್ಷೇತ್ರದಲ್ಲಿ) ಸ್ಥಾಪಿಸಿ ಪೂಜಿಸಿದರು.

**ಶ್ಲೋಕ:–** **ಶ್ರೀ ಕೃಷ್ಣ ಬಾಲಮೂರ್ತಿಸ್ಸಾ ಜಯತ್ಯಖಿಲಕಾಮದಾ ।**
**ರೂಪ್ಯಪೀಠಪುರೀ ರಮ್ಯಾ ಕೃಷ್ಣೇನ ಪ್ರಥಿತಾ ಯಥಾ ॥ ೫ ॥**
**ತಥಾ ತ್ರಿವಿಕ್ರಮಶ್ಚಾಪಿ ಬ್ರಹ್ಮಣಾ ಪೂಜಿತಃ ಪುರಾ ।**
**ಸೋದಾರಾಜ ಪ್ರಾರ್ಥನಯಾ ಸೋದಾಂ ಸಂಪ್ರಾಪಿತಃ ಶುಭಃ ॥ ೬ ॥**
**ಜಯತ್ಯತಿತರಾಂ ದೇವಃ ಸರ್ವಾಭೀಷ್ಟಾರ್ಥದಾಯಕಃ ।**
**ತಥಾ ತ್ರಿವಿಕ್ರಮೇಣ ಶ್ರೀ ಸೋದಾಽಪಿ ಪ್ರಥಿತಾ ಭುವಿ ॥ ೭ ॥**

**ಅರ್ಥ :–** ಸರ್ವಾಭೀಷ್ಟವನ್ನು  ಕೊಡುವ ಶ್ರೀಕೃಷ್ಣನ ಆಬಾಲಮೂರ್ತಿಯು ಉತ್ಕೃಷ್ಟವಾಗಿದೆ. ಮನೋಹರನಾದ ಶ್ರೀಕೃಷ್ಣನಿಂದ ಹೇಗೆ ಉಡುಪಿಕ್ಷೇತ್ರವು ಪ್ರಸಿದ್ಧವಾಗಿದೆಯೋ ಹಾಗೆ ಸೋದಾಪುರಿ ರಾಜನ ಪ್ರಾರ್ಥನೆಯಿಂದ ಸೋದಾಪುರಿಗೆ ಬಂದ, ಹಿಂದೆ ಬ್ರಹ್ಮನಿಂದ ಪೂಜಿತವಾದ ಸರ್ವಾಭೀಷ್ಟದಾಯಕವಾದ, ತ್ರಿವಿಕ್ರಮ ದೇವರೂ ಕೂಡ ಬಹಳವಾಗಿ ಉತ್ಕೃಷ್ಟನಾಗಿದ್ದಾನೆ. ಹಾಗೆಯೇ ತ್ರಿವಿಕ್ರಮನಿಂದಾಗಿ ಸೋದಾಪುರಿಯೂ ಕೂಡ ಭೂಮಿಯಲ್ಲಿ ಪ್ರಸಿದ್ಧವಾಗಿದೆ.

**ಶ್ಲೋಕ:–** **ಹರೇರ್ಲೀಲಾತನುಃ ಕೋಲಃ ಶ್ರೀಮದ್ವಕರ ಪೂಜಿತಃ ।**
**ವಿಷ್ಣುತೀರ್ಥೇಷ್ಟದಃ ಪಾಯಾದಪಾಯಾದ್ಭಕ್ತವೃಂದಕಮ್ ॥ ೮ ॥**

**ಅರ್ಥ:–** ಶ್ರೀ ವಿಷ್ಣುತೀರ್ಥರಿಗೆ ಇಷ್ಟದಾಯಕವಾದ ಶ್ರೀ ಮದ್ವಕರಾರ್ಚಿತವಾದ ಶ್ರೀ ಹರಿಯ ಅವತಾರ ರೂಪವಾದ ಭೂ ವರಾಹನು ಭಕ್ತರ ಸಮೂಹವನ್ನು ಅಪಾಯದಿಂದ ಕಾಪಾಡಲಿ

**ಶ್ಲೋಕ:–** **ಶ್ರೀವಾದಿರಾಜಹಸ್ತಾಬ್ಜಪೂಜಿತೌ ಕಾಮಿತಾನಿ ನಃ ।**
**ವ್ಯಾಸಾಶ್ವವದನೌ ದೇವೌ ಸಾಧಯೇತಾಂ ನಿರಂತರಮ್ ॥ ೯ ॥**

**ಅರ್ಥ:–** ಶ್ರೀ ವಾದಿರಾಜ ಕರಕಮಲಗಳಿಂದ ಪೂಜಿತರಾದ ವೇದವ್ಯಾಸ ಹಯಗ್ರೀವ ದೇವರುಗಳು ನಿರಂತರವಾಗಿ ನಮ್ಮ ಅಭಿಷ್ಟಗಳನ್ನು ನೆರವೇರಿಸುವವರಾಗಲಿ

**ಶ್ಲೋಕ:–** **ಶ್ರೀ ರಾಮವಿಠ್ಠಲೌ ವಾಲಿಸುಗ್ರೀವಾಭ್ಯಾಂ ಪುರಾಽರ್ಚಿತೌ ।**
**ಪಾಪಹಾನಿಂ ಜ್ಞಾನವೃದ್ಧಿಂ ಕ್ರಿಯಾಸ್ತಾಮಸ್ತದೋಷಕೌ ॥ ೧೦ ॥**

**ಅರ್ಥ:–** ಹಿಂದೆ ವಾಲಿಸುಗ್ರೀವರಿಂದ ಪೂಜಿತರಾದ, ದೋಷರಹಿತರಾದ ಶ್ರೀರಾಮ ವಿಠಲರು (ನಮಗೆ) ಪಾಪಹಾನಿಯನ್ನೂ ಜ್ಞಾನ ವೃದ್ಧಿಯನ್ನೂ ಮಾಡಲಿ

**ಶ್ಲೋಕ:–** **ಮಧ್ವಾಖ್ಯಭಾಸ್ಕರೋ ನಿತ್ಯಂ ಮಮ ಹೃತ್ಕಮಲಸ್ಥಿತಃ ।**
**ತಮಶ್ಚಯಂ ಪರಿಹರೇದ್ರಾಜಮಾನಗವಾಂ ಗಣೈಃ ॥ ೧೧ ॥**

**ಅರ್ಥ:–** ಮಧ್ವರೆಂಬ ಸೂರ್ಯನು ನಿತ್ಯದಲ್ಲೂ ನನ್ನ ಹೃತ್ಕಮಲದಲ್ಲಿ ಸ್ಥಿತನಾಗಿದ್ದು ಆಜ್ಞಾನ ವೆಂಬ ಕತ್ತಲೆಯನ್ನು ಶ್ರೇಷ್ಠ ಪ್ರಮಾಣಗಳಾದ (ವೇದ) ವಾಕ್ಯಸಮೂಹಗಳಿಂದ ಪರಿಹರಿಸಲಿ.

**ಶ್ಲೋಕ:–** **ಶ್ರೀವಿಷ್ಣು ತೀರ್ಥೋ ಯತಿರಾಡ್ವಿರಕ್ತಾನಾಂ ಶಿರೋಮಣಿಃ ।**
**ಲೋಕಾನುಗ್ರಹಕಾಮೋಽನ್ಯದುಷ್ಕರೇ ತಪಸಿ ಸ್ಥಿತಃ ॥ ೧೨ ॥**
**ಸಹ್ಯಾದ್ರಿಭಾಗವಿಲಸದ್ಧರಿಶ್ಚಂದ್ರಮಹೀಧರೇ ।**
**ದೀರ್ಘಜೀವೀ ಸ ಯೋಗೀಂದ್ರೋ ಭವತಾಚ್ಚಿತ್ತ ಶುದ್ಧಯೇ ॥ ೧೩ ॥**

**ಅರ್ಥ:–** ವಿರಕ್ತರಲ್ಲಿ ಶಿರೋಮಣಿಯಂತಿರುವ, ಲೋಕಾನುಗ್ರಹ ಮಾಡಲಿಚ್ಛಿಸುವ ಯೋಗಿವರ್ಯರಾದ ಶ್ರೀ ವಿಷ್ಣುತೀರ್ಥರು ಅನ್ಯರಿಂದ ಅಸಾಧ್ಯವಾದ ತಪಸ್ಸಿನಲ್ಲಿ ಸ್ಥಿತರಾಗಿರುವರು ಸಹ್ಯಾದ್ರಿಪರ್ವತಗಳ ಸಾಲಿನಲ್ಲಿ ಹರಿಶ್ಚಂದ್ರ ಪರ್ವತದಲ್ಲಿ ತಪಸ್ಸುಮಾಡುತ್ತಿರುವ ದೀರ್ಘಾಯುಗಳಾದ ಯೋಗಿಶ್ರೇಷ್ಠರಾದ ಶ್ರೀ ವಿಷ್ಣುತೀರ್ಥರು ನಮ್ಮ ಮನಶುದ್ಧಿ ಮಾಡುವವರಾಗಲಿ.

**ಶ್ಲೋಕ:–** **ಶ್ರೀವಾಗೀಶಮುನೀಶೋಽಪಿ ಶ್ರೀಶಾನುಗ್ರಹಭಾಸುರಃ ।**
**ದೋಷಶಾಂತ್ಯೈ ಪದಾಂಭೋಜ ಭಕ್ತಾನಾಂ ಭವತಾಚ್ಚಿರಮ್ ॥ ೧೪ ॥**

**ಅರ್ಥ:–** ಶ್ರೀಶನ ಅನುಗ್ರಹದಿಂದ ಶೋಭಿಸುವ ಶ್ರೀವಾಗೀಶ ಮುನಿಗಳೂಕೂಡ ತಮ್ಮ ಪಾದ ಕಮಲ ಭಕ್ತರುಗಳ ದೋಷವನ್ನು ಸದಾ ಶಮನ ಗೊಳಿಸುವವರಾಗಲಿ.

**ಶ್ಲೋಕ:–** **ಕೋಲವ್ಯಾಸಹಯಗ್ರೀವಪದಾಬ್ಜಪರಿಸೇವಕಃ ।**
**ಭಾವಿವಾಯುರ್ವಾದಿರಾಜಃ ಕಲ್ಪದ್ರುಃ ಕಾಮದೋಽಸ್ತು ನಃ ॥ ೧೫ ॥**

**ಅರ್ಥ :–** ಭೂ ವರಾಹ ವೇದವ್ಯಾಸ ಹಯಗ್ರೀವದೇವರ ಪಾದಕಮಲ ಸೇವಕರಾದ ಭಾವೀ ವಾಯುಗಳಾದ ಕಲ್ಪದ್ರುಮದಂತಿರುವ ಶ್ರೀ ವಾದಿರಾಜರು ನಮಗೆ ಅಭೀಷ್ಟಗಳನ್ನು ಕೊಡುವವರಾಗಲಿ

**ಶ್ಲೋಕ:–** **ವೇದವೇದ್ಯಾನವದ್ಯಾತ್ಮಹಯಗ್ರೀವಾರ್ಚಕಃ ಸದಾ ।**
**ವೇದವೇದ್ಯಾಖ್ಯಯೋಗೀಂದ್ರಃ ಪ್ರೀಯತಾಂ ಯತಿರಾಡೃಜುಃ ॥ ೧೬ ॥**

**ಅರ್ಥ:–** ವೇದಗಳನ್ನುತಿಳಿದ ದೋಷರಾಹಿತಾತ್ಮಕನಾದ, ಯತಿವರ್ಯನಾದ ಋಜುವಾದ ವೇದವೇದ್ಯನೆಂಬ ಹೆಸರಿನ ಯೋಗಿಶ್ರೇಷ್ಠನು ಪ್ರೀತನಾಗಲಿ.

**ಶ್ಲೋಕ:–** **ಶ್ರೀಮದ್ವೇದಾಂತಸಿದ್ಧಾಂತಬೋಧನೋತ್ಕಃ ಸದಾ ಭುವಿ ।**
**ಶ್ರೀಮದ್ವೇದನಿಧಿರ್ಜ್ಞಾನಂ ದದ್ಯಾದ್ವಿದ್ಯಾಗುರುರ್ಮಮ ॥ ೧೭ ॥**

**ಅರ್ಥ:–** ಭೂಮಿಯಲ್ಲಿ ಸಂಪದ್ಭರಿತವಾದ ವೇದಾಂತ ಸಿದ್ಧಾಂತವನ್ನು ಬೋಧಿಸಲು ಸದಾ ಉತ್ಸುಕನಾದ, ನನ್ನ ವಿದ್ಯಾಗುರುವಾದ ಶ್ರೀ ವೇದನಿಧಿಗಳು ಜ್ಞಾನವನ್ನು ದಯಪಾಲಿಸಲಿ

**ಶ್ಲೋಕ:–** **ಇತಿ ಋಜುವರರಾಜದ್ವಾದಿರಾಜಸ್ಯ ಭವ್ಯಂ**
**ಚರಿತಮಮೃತಮೇತತ್ಸೇವ್ಯತಾಂ ಮೋಕ್ಷದಾಯಿ ।**

**ಅರ್ಥ:–** ಋಜುಶ್ರೇಷ್ಠರಾಗಿ ಪ್ರಕಾಶಿಸುವ ಶ್ರೀ ವಾದಿರಾಜರ, ಮೋಕ್ಷದಾಯಕವಾದ ಈ ಭವ್ಯ ಚರಿತಾಮೃತವು ಸೇವಿಸಲ್ಪಡಲಿ.

**ಶ್ಲೋಕ:–** **ಇಹ ಚ ದುರಿತಹಾರಿ ಸ್ವೇಷ್ಟಸರ್ವಾರ್ಥದಂ ದ್ರಾಗ್**
**ಜಯತು ರಚಿತಮೇತದ್ರಾಮಚಂದ್ರೇಣ ಭೂಮೌ ॥ ೧೮ ॥**

**ಅರ್ಥ:–** ಈ ಲೋಕದಲ್ಲಿ ದುರಿತಗಳನ್ನು ಪರಿಹರಿಸುವ, ತಮ್ಮ ಅಭೀಷ್ಟಗಳನ್ನು ಶೀಘ್ರವಾಗಿ ಕೊಡುವ ರಾಮಚಂದ್ರಾಚಾರ್ಯರಿಂದ ರಚಿತವಾದ ಈ ಗ್ರಂಥವು ಭೂಮಿಯಲ್ಲಿ ಉತ್ಕೃಷ್ಟವಾಗಿದೆ.

**ಶ್ಲೋಕ:–** **ಶ್ರೀ ವಾದಿರಾಜಃ ಶಿವಶಕ್ರಮುಖ್ಯ**
**ದೇವಾಭಿವಂದ್ಯಾಂಘ್ರಿಸರೋಜ ಯುಗ್ಮಃ ।**
**ಭೀಂತಾಂ ಕೃಪಾವೃಷ್ಟ್ಯ ಭಿವರ್ಷಣೇನ**
**ಚಿಂತಾಂ ದುರಂತಾಂ ಮಮ ಮಾನಸೋತ್ಥಾಮ್ ॥ ೧೯ ॥**

**ಅರ್ಥ :–** ರುದ್ರ ಇಂದ್ರರೇ ಮೊದಲಿನ ದೇವತೆಗಳಿಂದ ವಂದಿತವಾದ ಪಾದಕಮಲಗಳನ್ನುಳ್ಳ ಶ್ರೀವಾದಿರಾಜರು ಕೃಪಾದೃಷ್ಟಿಯನ್ನು ವರ್ಷಿಸುವ ಮೂಲಕ ನನ್ನ ಮನಸ್ಸಿನಲ್ಲಿ ಉಂಟಾದ ಚಿಂತೆಯನ್ನು ದುರಂತವನ್ನೂ ನಾಶಮಾಡಲಿ.

**ಶ್ಲೋಕ:–** **ಶ್ರೀಮಧ್ವವಾದಿರಾಡ್ಹಂಸೌ ಗುರೂತ್ತಂಸೌ ಗತಾಂಹಸೌ ।**
**ಹೃದ್ಯಾನವದ್ಯವಿದ್ಯಾಂ ಮೇ ದದ್ಯಾಸ್ತಾಂ ಕರುಣಾನಿಧೀ ॥ ೨೦ ॥**

**ಅರ್ಥ:–** ಕರುಣಾನಿಧಿಗಳಾದ, ದೋಷರಹಿತವಾದ, ಗುರುಶ್ರೇಷ್ಠರಾದ ಈ ಮಧ್ವ ಮತ್ತು ವಾದಿರಾಜರು ಸಂತೋಷದಿಂದ ನನಗೆ ದೋಷರಹಿತರಾದ ವಿದ್ಯೆಯನ್ನು ಕೊಡುವವರಾಗಲಿ

**ಶ್ಲೋಕ:–** **ಶ್ರೀ ವೇದನಿಧಿಹೃದ್ಗ ಶ್ರೀವಾದಿರಾಜಹೃದಬ್ಜ ಗಃ ।**
**ಹಯಾಸ್ಯರೂಪೀ ಶ್ರೀಕೃಷ್ಣೋ ಗ್ರಂಥೇನಾನೇನ ತೃಪ್ಯತು ॥ ೨೧ ॥**

**ಅರ್ಥ:–** ಶ್ರೀ ವೇದನಿಧಿ ಹೃದಯಾಂತರ್ಗತ, ಶ್ರೀ ವಾದಿರಾಜ ಹೃತ್ಕಮಲ ನಿವಾಸಿ ಹಯಗ್ರೀವ ರೂಪಿಯಾದ ಶ್ರೀಕೃಷ್ಣನು ಈ ಗ್ರಂಥದಿಂದ ತೃಪ್ತನಾಗಲಿ.

**ಇತಿ ಶ್ರೀ ಪರಮಹಂಸಪರಿವ್ರಾಜಕಾಚಾರ್ಯಭಾವಿಸಮೀರ ಶ್ರೀವಾದಿರಾಜ ಪೂಜ್ಯ ಚರಣ**
**ಪ್ರಶಿಷ್ಯ ಶ್ರೀ ಶ್ರೀಮದ್ವೇದನಿಧಿತೀರ್ಥಾಂತೇವಾಸಿ ರಾಮಚಂದ್ರಾಚಾರ್ಯ ಪ್ರಣೀತೇ**
**ಶ್ರೀವಾದಿರಾಜಗುರುವರಚರಿತಾಮೃತೇ ನಮಮ ಬಿಂದುಃ ಸಮಾಪ್ತಃ ।**
**॥ ಸಂಪೂರ್ಣಮಿದಂ ಶ್ರೀವಾದಿರಾಜಗುರುವರಚರಿತಾಮೃತಮ್ ॥**
**॥ ಶ್ರೀಮಧ್ವೇಶಾರ್ಪಣಮಸ್ತು ॥**

ಇಲ್ಲಿಗೆ ಶ್ರೀ ಪರಮಹಂಸ ಪರಿವ್ರಾಜಕಾಚಾರ್ಯ ಭಾವಿಸಮೀರ ಶ್ರೀವಾದಿರಾಜ ಪೂಜ್ಯ ಚರಣರ ಪ್ರಶಿಷ್ಯರಾದ ಶ್ರೀ ಶ್ರೀ ಮದ್ವೇದನಿಧಿ ತೀರ್ಥರ ವಿದ್ಯಾಶಿಷ್ಯರಾದ ರಾಮಚಂದ್ರಾಚಾರ್ಯರಿಂದ ರಚಿತವಾದ ಶ್ರೀ ವಾದಿರಾಜಗುರುವರ ಚರಿತಾಮೃತದಲ್ಲಿ ಒಂಬತ್ತನೆಯ ಬಿಂದು ಮುಗಿಯಿತು.

**ಇಲ್ಲಿಗೆ ಶ್ರೀ ವಾದಿರಾಜಗುರುವರ ಚರಿತಾಮೃತಮುಗಿಯಿತು.**
**ಶ್ರೀ ಕೃಷ್ಣಾರ್ಪಣಮಸ್ತು.**